ದ್ವಿತೀಯ ಗ್ರಂಥ

ಮಹಾರಾಣಾ - ಹಮೀರಸಿಂಹ

ಅಥವಾ

# ಚಿತ್ತೂರಿನ ಪುನರುದ್ಧಾರ

ಬೆಲೆ :

(೦—೩—೦)

ಲೇಖಕ :—

ಲ. ಅ. ಶಿರಹಟ್ಟಿ.

ಶ್ರೀ ಶಾರದಾ ವಿಲಾಸ ಮಂದಿರ, ತೊರವಿ.

ಕರ್ನಾಟಕ ವಾಙ್ಮಯೋತ್ತೇಜಕ ಗ್ರಂಥಮಾಲೆಯ

ದ್ವಿತೀಯ ಗ್ರಂಥವು.



# ಮಹಾರಾಣಾ-ಹಮೀರಸಿಂಹ

ಅಥವಾ

# ಚಿತ್ತೂರಿನ ಪುನರುದ್ಧಾರ

ಇದನ್ನು

**ಲಕ್ಕಪ್ಪಾ ಅಪ್ಪಪ್ಪಾ ಶಿರಹಟ್ಟಿ**

ಅಸಿ. ಮಾಸ್ತರ ಶಾಳಾ ತೊರವಿ ತಾ. ವಿಜಾಪುರ

ಇವರು ಬರೆದರು.





ಬೆಲೆ : ಮೂರು ಆಣೆಗಳು.

ಮಂಗಳೂರು

ಕೊಡಿಯಾಲ್‌ಬೈಲ್ ಛಾಪಖಾನೆಯ ಜಿ. ಎಮ್. ಸುವಾರಿಸರಿಂದ ಛಾಪಿಸಲ್ಪಟ್ಟು,
ಲಕ್ಕಪ್ಪಾ ಅವ್ವಪ್ಪಾ ಶಿರಹಟ್ಟಿ, ಅಸಿ. ಮಾಸ್ತರ ಶಾಲಾ ತೊರವಿ, ತಾಲೂಕು ವಿಜಾಪುರ
ಇವರಿಂದ ಪ್ರಕಟಿಸಲ್ಪಟ್ಟಿತು.

# ಪ್ರಸ್ತಾವನೆ.



ಭಾರತೀಯ ವೀರರ ಪ್ರತಾಪಪ್ರದರ್ಶಕವಾದ ಹಾಗು ಮನೋರಂಜಕವಾದ ಈ ಪುಸ್ತಕವನ್ನು ಇದರ ಕರ್ತರು ಪ್ರೇಮಾದರಗಳಿಂದ ನನ್ನ ಕಡೆಗೆ ಕಳುಹಿ ತಮ್ಮ ಅಲ್ಪಕೃತಿಯನ್ನು ಕನ್ನಡಿಗರ ಮುಂದಿಡಲು ವಿಜ್ಞಾಪಿಸಿರುವರು. ಈ ಕೆಲಸವನ್ನು ಮಾಡಲು ನನಗೆ ಅತ್ಯಂತ ಆನಂದವೆನಿಸುತ್ತದೆ.

ಪುಸ್ತಕವು ಬಹಳ ಸಣ್ಣದಾಗಿದ್ದರೂ ಮನೋಹರವಾಗಿರುವದು. ಕಟ್ಟುಕಥೆಯಿಂದಲೂ ಸುಳ್ಳುಸಂಗತಿಗಳಿಂದಲೂ ಕೂಡಿ ಕೇವಲ ವಾಚಕರ ಮನರಂಜನಗೊಳಿಸುವಂಥದೂ ಅಲ್ಲ. ಮೇವಾಡದ ರಾಣಾರ ವಂಶದಲ್ಲಿ ಉದ್ಭವಿಸಿ ಮಹಾಪ್ರತಾಪಶಾಲಿಯೆಂದು ಹೆಸರು ವಾಸಿಯಾದ ಮಹಾರಾಣಾ ಹಮೀರಸಿಂಹನ ಚರಿತ್ರೆಯು ಅತಿ ಸಂಕ್ಷೇಪವಾಗಿ ಇದರಲ್ಲಿ ವರ್ಣಿಸಲ್ಪಟ್ಟಿದೆ. ಯವನರಿಂದ ಹಾಳು ಮಾಡಲ್ಪಟ್ಟ ಚಿತ್ತೂರನ್ನೂ ಗತಿಗೆಟ್ಟ ಜನರನ್ನೂ, ಅಪವಿತ್ರ ಮಾಡಲ್ಪಟ್ಟ ದೇವಾಲಯಗಳನ್ನೂ ವಿಧ್ವಂಸವಾದ ಅರಮನೆ ಗೋಪುರಗಳನ್ನೂ ಅಷ್ಟೇಕೆ, ಯವನರ ಬಾಧೆಗೊಳಪಟ್ಟು ಪರಿಪರಿಯ ಕಷ್ಟಗಳನ್ನು ಅನುಭೋಗಿಸುತ್ತಿದ್ದ ಚಿತ್ತೂರಿನ ರಾಜ್ಯವನ್ನೇ ಉದ್ಧರಿಸಿದ ಮಹಾರಾಣಾ ಹಮೀರಸಿಂಹನ ಈ ಚರಿತ್ರೆಯನ್ನು ಓದಿ ವಾಚಕರು ತಮ್ಮ ಪೂರ್ವಜರ ಬಗ್ಗೆ ಸ್ವಲ್ಪಾದರೂ ಅಭಿಮಾನವನ್ನು ತಾಳಿದರೆ ಲೇಖಕರ ಶ್ರಮವು ಸಾರ್ಥಕವಾದಂತಾಗುವದು.

ತಮ್ಮ ಯೋಗ್ಯತೆಯಿದ್ದಂತೆ ಕರ್ನಾಟಕ ಸಾಹಿತ್ಯಸುಧಾರಣೆಯನ್ನು ಮಾಡಲು ಹವಣಿಸುವವರಿಗೆ ಸಹಾಯಮಾಡಿ ಅವರು ಹೆಚ್ಚುಹೆಚ್ಚು ಭಾಷಾಸೇವೆಯನ್ನು ಮಾಡುವಂತೆ ಹುರುಪುಗೊಡುವದು ಪ್ರತಿಯೊಬ್ಬ ಕನ್ನಡಿಗನ ಕರ್ತವ್ಯವಾಗಿರುತ್ತದೆ. ಈ ಕರ್ತವ್ಯದಲ್ಲಿ ವಿಶೇಷವಾಗಿ ಮನಸ್ಸುಹಾಕುತ್ತಿರುವ ಮತ್ತು ಪ್ರಸ್ತುತ ಲೇಖಕರಿಗೆ ಈ ವಿಷಯದಲ್ಲಿ ಬಗೆಬಗೆಯಿಂದ ಸಹಾಯ ಮಾಡುತ್ತಿರುವ ಮ. ರಾ. ರಾ. ಸಿ. ನಾ. ಮಹಾಂತಣ್ಣವರ ಹೆ. ಮಾ. ದರ್ಗಾ ಇವರನ್ನು ಎಷ್ಟು ಕೊಂಡಾಡಿದರೂ ಕಡಿಮೆಯೇ ಸರಿ. ಈ ಮಹನೀಯರ ಮಾದರಿಯನ್ನು ಬಹು ಜನರು ಅನುಕರಿಸಿದರೆ ಕರ್ನಾಟಕ ಭಾಷೆಯಲ್ಲಿ ತೋರುವ ಕೊರತೆಯು ಪೂರೈಸಲ್ಪಡುವದೆಂಬಲ್ಲಿ ಸಂದೇಹವಿಲ್ಲ.

ತೊರವಿ,
ಸಂವತ್ಸರ ಪ್ರತಿಪದೆ, ಶಕೆ ೧೮೪೪.
ತಾ. ೨೯ — ೩ — ೨೨.

R. N. PATIL.

# ಕರ್ನಾಟಕ ಚಕ್ರವರ್ತಿ-ಚಾಲುಕ್ಯವಿಕ್ರಮ

## ಪ್ರಥಮಗ್ರಂಥವು.

ಭಾಷಾಭಿಮಾನಿಗಳಾದ ಕನ್ನಡಿಗರೆ—

ಸಾಮಾಜಿಕ ಧಾರ್ಮಿಕ ಮೊದಲಾದ ಸತ್ಕಾರ್ಯಗಳನ್ನು ಮಾಡಹೋದರೆ ವಿಘ್ನಗಳು ಹೆಚ್ಚಾಗಿ ಒದಗುವವು. ಅದರಂತೆ ಮತ, ರಾಜ್ಯ, ಸಂಘ ಮೊದಲಾದವುಗಳ ಸ್ಥಾಪಕರಾದರೂ ಆರಂಭದಲ್ಲಿ ಅನೇಕ ತರದ ಯಾತಾಯಾತಗಳನ್ನು ಅನುಭೋಗಿಸಬೇಕಾಗುವದಲ್ಲದೆ, ಅಪಕೀರ್ತಿಗೂ ಅವಮಾನಕ್ಕೂ ಪಾತ್ರರಾಗುವರು. ಇದೊಂದು ಸೃಷ್ಟಿಯ ಸಹಜ ನಿಯಮವೇ ಆಗಿರುವದು. ಆದರೂ ಅವರು ಮುಂದೆ ತಮ್ಮ ಅತುಲವಾದ ಸಾಮರ್ಥ್ಯದಿಂದ ತಮ್ಮ ಉದ್ದೇಶವನ್ನು ಕೊನೆಗಾಣಿಸಿ ಸರ್ವಮಾನ್ಯರಾಗಿ ಚಿರಕಾಲ ಕೀರ್ತಿ ಶೇಷರಾಗುವದು ನಿಶ್ಚಯವಾದದ್ದು. ಇದಕ್ಕೆ ನಮ್ಮ ಪ್ರಾಚೀನ ಇತಿಹಾಸದಲ್ಲಿ ಅನೇಕ ಉದಾಹರಣೆಗಳು ದೊರೆಯುವವು. ಈ ನಿಸರ್ಗಸಿದ್ಧವಾದ ನಿಯಮಕ್ಕನುಸರಿಸಿಯೇ ನಮ್ಮ **ಕರ್ನಾಟಕ ವಾಙ್ಮಯೋತ್ತೇಜಕ ಗ್ರಂಥಮಾಲೆಯ** ಮೂಲಪುರುಷನಾದ (ಮೊದಲಿನ ಗ್ರಂಥವಾದ) **ಕರ್ನಾಟಕ ಚಕ್ರವರ್ತಿ ಚಾಲುಕ್ಯ ವಿಕ್ರಮನು** ಕನ್ನಡಿಗರ ನಯನಾಕಾಶದಲ್ಲಿ ಬಾಲಸೂರ್ಯನಂತೆ ಪ್ರಕಾಶಿಸದೆ ವಿಘ್ನಗಳೆಂಬ ಮೇಘಗಳಲ್ಲಿ ಸಿಕ್ಕು ತೊಳಲುತ್ತಿರುವನು. ಆದರೂ ಸ್ವಲ್ಪ ದಿವಸಗಳಲ್ಲಿ ಕಷ್ಟನಿವಾರಣೆಯನ್ನು ಮಾಡಿಕೊಂಡು ಕನ್ನಡಿಗರ ಮನಾನಂದಗೊಳಿಸುವನೆಂಬದಕ್ಕೆ ಸಂದೇಹವಿಲ್ಲ.

ನನ್ನ ಪ್ರಥಮ ಪ್ರಯತ್ನಾದರ್ಶಕವಾದ 'ಚಾಲುಕ್ಯವಿಕ್ರಮ' ಎಂಬ ಪ್ರಥಮ ಪುಸ್ತಕವು ಅನೇಕರ ಆದರಕ್ಕೆ ಪಾತ್ರವಾಗಿ **ಗು. ಶ್ರೀ ರಾ. ರಾ. ವೆಂಕಟೇಶರಾವ ಮುಗದಾಲ** ಅ. ಡೆ. ಎ. ಇ. ಜಿ. ಧಾರವಾಡ ಇವರಿಂದ ಮುನ್ನುಡಿಯನ್ನು ಬರೆಯಿಸಿಕೊಂಡು ಕೆಲಮಹನೀಯರಿಂದ (ಇವರ ಹೆಸರುಗಳನ್ನು ಆ ಗ್ರಂಥದೊಡನೆಯೇ ಪ್ರಸಿದ್ಧಿಸುವೆನು) ಮುದ್ರಣಕ್ಕಾಗಿ ಧನಾಶ್ರಯವನ್ನು ಪಡೆದು ಪ್ರಕಟವಾಗಲು ಪ್ರಯತ್ನಿಸಿತು. ಆದರೆ ಅದನ್ನು ಮುದ್ರಿಸುವದಕ್ಕಾಗಿ ತೆಗೆದುಕೊಂಡ ಪ್ರೆಸ್ಸಿನವರು ಇಂದುನಾಳೆಂದು ಕೆಲವು ದಿವಸಗಳನ್ನು ಕಳೆದು ಕೊನೆಗೆ ಗುಪ್ತರೀತಿಯಿಂದ ತಮ್ಮ ಪ್ರೆಸ್ಸನ್ನು ಯಾರವಶದಲ್ಲಿಯೋ ಕೊಟ್ಟು, ಎಲ್ಲಿಯೋ ಹೋಗಿಬಿಟ್ಟಿರುವರು. ನಾವು ಅಡ್ವಾನ್ಸಿಗಾಗಿ ಕೊಟ್ಟ ೭೫ ರೂ.ಗಳೂ ಈ ಪುಸ್ತಕದ ಹಸ್ತಲಿಖಿತ ಪ್ರತಿಯೂ ಅವರ ಕಡೆಗೆಯೇ ಉಳಿದಿವೆ. ಹೀಗಾಗಿ ಸದ್ಯಕ್ಕೆ ಅದು ಬೈಲಿಗೆ ಬರದೆ ಬಂಧನವನ್ನು ಭೋಗಿಸಬೇಕಾಗಿದೆ. **ಆದಕಾರಣ ಅತಿಶಣ್ಣದಾದ ಚಿತ್ರಾ**

ರಿನ ಪುನರುದ್ಧಾರವೆಂಬ ದ್ವಿತೀಯ ಪುಸ್ತಕವನ್ನೇ ಮೊದಲು ಪ್ರಕಟ ಮಾಡಬೇಕಾಯಿತು. ಇನ್ನು ಕೆಲಕಾಲದಲ್ಲಿಯೇ ಚಾಲುಕ್ಯವಿಕ್ರಮನನ್ನಾದರೂ ಪ್ರಕಟಿಸುವ ವ್ಯವಸ್ಥೆಯಾಗುವದು. ವಂಚಕರಿಂದ ಒದಗಿದ ಈ ನ್ಯೂನತೆಯನ್ನು ನೋಡಿ ಜರೆಯದೆ ಎಲ್ಲ ರೀತಿಯಿಂದಲೂ ಗ್ರಂಥಮಾಲೆಗೆ ಸಹಾಯ ಮಾಡಬೇಕೆಂದು ಬೇಡಿಕೊಳ್ಳುವೆನು. ಮತ್ತು ಮುಂದೆ ಗ್ರಂಥಮಾಲೆಯ ಕಾರ್ಯಗಳನ್ನು ನಿರ್ವಿಘ್ನದಿಂದ ನಡೆಯಿಸುವದಕ್ಕಾಗಿ ಶ್ರೀಶಂಕರನನ್ನು ಪ್ರಾರ್ಥಿಸುವೆನು.

ವಿದ್ವಜ್ಜನ ವಿಧೇಯ,

**ಗ್ರಂಥಕರ್ತ.**



# ಅನುಕ್ರಮಣಿಕೆ.

## ಮಹಾರಾಣಾ-ಹಮಿರಸಿಂಹ

ಅಥವಾ

# ಚಿತ್ತೂರಿನ ಪುನರುದ್ಧಾರ



## ೧. ವರಪ್ರದಾನದ ಕುರುಹು.

ಪ್ರಾತಃಕಾಲದ ಸಮಯ; ಭಗವಾನ್ ಸೂರ್ಯದೇವನು ಉದಯಿಸಿ ಸುಮಾರು ಅರ್ಧ ತಾಸಾಗಿರಬಹುದು. ಎಲ್ಲ ಕಡೆಯಲ್ಲಿಯೂ ಎಳೆ ಬಿಸಿಲು ಪಸರಿಸಿ, ಹಚ್ಚಗೆ ಹಸರು ಮುರಿಯುತ್ತಿರುವ ಭೂಮಿಯನ್ನು ಮತ್ತಿಷ್ಟು ಶೋಭೆಗೊಳಿಸಿದ್ದಿತು. ಸರ್ವಪ್ರಾಣಿಗಳು ಉಲ್ಹಾಸದಿಂದ ಸಂಚರಿಸತೊಡಗಿದ್ದವು. ಈ ಸಮಯದಲ್ಲಿ ಏಕಲಿಂಗಜಿಯ ಗುಡ್ಡದ ಶೋಭೆಯನ್ನಂತೂ ಬಣ್ಣಿಸಲಳವಲ್ಲ; ಗುಡ್ಡದ ಬದಿಗಳಲ್ಲಿಯೂ ಮೇಲೆಯೂ ದಟ್ಟಾಗಿ ಬೆಳೆದ ವೃಕ್ಷಗಳು, ಸೂರ್ಯನ ಎಳೆಗಿರಣಗಳಿಂದ ಹೊಳೆಯುವ ಪಲ್ಲವಗಳಿಂದೊಡಗೂಡಿ ಶೋಭಿಸುತ್ತಿದ್ದವು. ಆ ಗುಡ್ಡದ ಮೇಲಿರುವ ದೇವಾಲಯದ ಭವ್ಯವಾದ ಬಿಳೇ ಗೋಡೆಗಳು ಗಿಡಗಳ ಸಂದಿನೊಳಗಿಂದ ಹಾಯ್ದು ಕಾಣುತ್ತಿರುವವು. ಗುಡ್ಡದ ಪೂರ್ವ ದಿಕ್ಕಿಗಿರುವ ಮಾರ್ಗದಿಂದ ಗುಡ್ಡವನ್ನೇರಿ ಹೋಗಿ ದೇವಾಲಯದ ಮಹಾದ್ವಾರದ ಮುಂದೆ ನಿಲ್ಲಲು ದೇವಾಲಯದ ಭವ್ಯತೆಯು ನೋಡುವವರನ್ನು ಆಶ್ಚರ್ಯಗೊಳಿಸುವದು. ದೇವಾಲಯದ ಶುಭ್ರವಾದ ಗೋಡೆಗಳು, ಗಿಡಗಳ ಸಂದಿನೊಳಗಿಂದ ಪಾರಾಗಿ ಬಂದು ಅಲ್ಲಲ್ಲಿ ಬಿದ್ದಿರುವ ಎಳೆಬಿಸಿಲಿನಿಂದ ಚಿತ್ರಮಯವಾದವುಗಳಂತೆ ಕಂಗೊಳಿಸುತ್ತಿದ್ದವು.

ಇದು ಏಕಲಿಂಗಜಿಯ ದೇವಾಲಯವು. ಏಕಲಿಂಗಜಿಯು ಚಿತ್ತೂರಿನ ರಾಣಾರವರ ಕುಲದೇವತೆಯು; **ಬಾಪ್ಪಾರಾವಳ**ನಿಂದ ಮುಂದೆ ಆಳಿದ ಎಲ್ಲ ಚಿತ್ತೂರಿನ ಅರಸರು ಏಕಲಿಂಗಜಿಯಲ್ಲಿ ನಿಸ್ಸೀಮ ಭಕ್ತಿಯುಳ್ಳವರಾಗಿದ್ದರು. ಅವರು ತಮಗೆ ಅನಿವಾರ ಸಂಕಟವು ಪ್ರಾಪ್ತವಾದಾಗ ಏಕಲಿಂಗಜಿಯನ್ನೇ ಮರೆಹೊಗುವರು. ಆಗ ಏಕಲಿಂಗಜಿಯು ಅವರಿಗೆ ಸ್ವಪ್ನದಿಂದಾಗಲಿ ಪರ್ಯಾಯದಿಂದಾಗಲಿ ಮಾರ್ಗದರ್ಶಕನಾಗಿ ಅವರ ಸಂಕಟವನ್ನು ನಿವಾರಣ ಮಾಡುತ್ತಿದ್ದನಂತೆ. ಏಕಲಿಂಗಜಿಯ ದಯದಿಂದಲೇ ಚಿತ್ತೂರಿನ ರಾಜವಂಶವು ಬಹು ದಿವಸದಿಂದಲೂ ಪ್ರಖ್ಯಾತವಾಗಿ ಮೆರೆಯುತ್ತಿರುವದೆಂದು ಚಿತ್ತೂರಿನ ಜನರು, ಅಷ್ಟೇಕೆ ಮೇವಾಡದ ಎಲ್ಲ ಪ್ರಜೆಗಳು ನಂಬಿರುವರು. ಆ ಕಾರಣದಿಂದಲೇ ಏಕಲಿಂಗಜಿಯ ಪೂಜೋತ್ಸವಾದಿ ವೈಭವಗಳು ಮಿಗಿಲಾಗಿದ್ದವು. ಆದಾಗ್ಯೂ ಏಕಲಿಂಗಜಿಯು ಯಾವಕಾರಣದಿಂದ ಪ್ರಕೋಪಿತನಾದನೋ ಏನೋ? ಸ್ವಲ್ಪ ದಿವಸಗಳ ಹಿಂದೆ ಚಿತ್ತೂರಿನ ರಾಜ್ಯವು ಬಹುದೊಡ್ಡ ಗಂಡಾಂತರದ ಬಾಯಿಗೆ ತುತ್ತಾಯಿತು. ಅದಿರಲಿ!

ವಾಚಕ ಮಹನೀಯರೇ, ಮೊದಲು ಈಗ ದೇವಾಲಯದ ಅಂತಶ್ಶೋಭೆಯನ್ನು ನೋಡಬನ್ನಿರಿ. ಗರ್ಭಗುಡಿಯ ಮುಂದಿನ ವಿಸ್ತಾರವಾದ ಅಂಗಣದಲ್ಲಿ ಭಕ್ತಸಮೂಹವು ನೆರೆದಿತ್ತು. ಸ್ವಲ್ಪ ಹೊತ್ತಿನ ಕೆಳಗೆ ದೇವರ ಪೂಜೆಯು ಪೂರೈಸಲ್ಪಟ್ಟದ್ದರಿಂದ ಜನರು ದೇವಾಲಯದಿಂದ ಹೊರಹೊರಡತೊಡಗಿದ್ದರು. ಅರ್ಚಕರು ಮಹಾದ್ವಾರದ ಎದುರಿನಲ್ಲಿರುವ ಕಟ್ಟೆಯ ಮೇಲೆ ಕುಳಿತು ಯಾವನೋ ಒಬ್ಬನ ಮಾರ್ಗಪ್ರತೀಕ್ಷೆಯನ್ನು ಮಾಡುತ್ತಿದ್ದರು. ಮುಂದೆ ಅಲ್ಪಾವಕಾಶದಲ್ಲಿಯೇ ಅವರ ಮುಖಗಳು ಉಲ್ಲಸಿತವಾದವು. ಯಾಕಂದರೆ ಅವರ ಮಾರ್ಗಪ್ರತೀಕ್ಷೆಗೆ ಕಾರಣನಾದ ಪುರುಷನು ಬಾಗಿಲಿಗೆ ಬಂದಿದ್ದನು.

ದೇವಾಲಯದ ಮಹಾದ್ವಾರದಲ್ಲಿ ಅಕಸ್ಮಾತ್ತಾಗಿ ಎರಡು ಕುದುರೆಗಳು ಬಂದು ನಿಂತವು. ಅವುಗಳಲ್ಲಿ ಒಂದರ ಮೇಲೆ ಕುಳಿತ ತರುಣನಾದ ವೀರಶಿರೋಮಣಿಯು ರಾಜಪುತ್ರನಂತೆ ಕಂಗೊಳಿಸುತ್ತಿದ್ದನು. ಮತ್ತೊಬ್ಬನು ಅವನ ಸೇವಕನಾಗಿದ್ದನು. ತರುಣವೀರನ ವಯಸ್ಸು ಇಪ್ಪತ್ತು ವರ್ಷಕ್ಕೆ

ಮಿಕ್ಕಿದ್ದಿಲ್ಲ; ಆತನ ಮುಖದ ಮೇಲೆ ವಿಜಯಶ್ರೀಯು ನಲಿದಾಡುತ್ತಿದ್ದಳು. ಆತನು ತಲೆಗೆ ಸುತ್ತಿದ ಕಂದೀ ಬಣ್ಣದ ಮುಂದೀಲವೂ ಜರದ ಕಸೂತಿಯನ್ನು ತೆಗೆದ ಹಳದೀ ವರ್ಣದ ನಿಲುವಂಗಿಯೂ ಶೋಭಾಯಮಾನವಾಗಿದ್ದವು. ಜರದ ಸೆಲ್ಲೆಯನ್ನು ಹೆಗಲಮೇಲೆ ಹಾಕಿಕೊಂಡಿದ್ದನು. ನಿಡಿದಾದ ಖಡ್ಗವು ಅವನ ಟೊಂಕದಿಂದ ಇಳಿಬಿದ್ದಿತ್ತು. ತರುಣನು ಕುದುರೆಯನ್ನು ನಿಲ್ಲಿಸಿದ ಬಳಿಕ ನಿಟ್ಟುಸಿರು ಬಿಟ್ಟು ಕುದುರೆಯನ್ನು ಇಳಿದನು. ಅದನ್ನು ಸೇವಕನ ಕೈಯಲ್ಲಿ ಕೊಟ್ಟು ಮೆಲ್ಲನೆ ಮಹಾದ್ವಾರವನ್ನು ಪ್ರವೇಶಿಸಿದನು. ಮನಸ್ಸು ವ್ಯಗ್ರವಾದದ್ದರಿಂದ ಆತನ ಮುಖದಲ್ಲಿ ಉದಾಸೀನತೆಯ ಕಳೆಯು ತೋರುತ್ತಿತ್ತು. ಆತನು ತನಗೆದುರಾಗಿ ಬರುವ ಜನರ ಪ್ರಣಾಮಗಳನ್ನು ಸ್ವೀಕರಿಸುತ್ತ ಅಂಗಣದ ಮಧ್ಯಭಾಗದ ವರೆಗೆ ಬಂದನು. ಅಷ್ಟರಲ್ಲಿ ಆತನ ದೃಷ್ಟಿಯು ಮಾರ್ಗದ ಬದಿಯಲ್ಲಿ ನಿಂತಿರುವ ಒಬ್ಬ ಸುಂದರ ಬಾಲೆಯ ಕಡೆಗೆ ಅಕಸ್ಮಾತ್ತಾಗಿ ಹೋಯಿತು. ಅವಳ ದಿವ್ಯ ಸೌಂದರ್ಯದಿಂದ ಮನಸ್ಸು ಪೂರ್ಣವಾಗಿ ಆಕರ್ಷಿಸಲ್ಪಟ್ಟರೂ ಆತನು ಅದನ್ನು ತಿರುಗಿಸಿಕೊಂಡು ಭಕ್ತಿಪರವಶನಾಗಿ ದೇವದರ್ಶನಕ್ಕೆಂದು ನಡೆದನು. ಅರ್ಚಕನೊಬ್ಬನು ಆನಂದದಿಂದ ಮುಂದಾಗಿ ಆ ತರುಣವೀರನನ್ನು ಗರ್ಭಗುಡಿಯಲ್ಲಿ ಕರೆದೊಯ್ದನು. ಮತ್ತು ದೇವರಿಗೆ ಮಂಗಲಾರುತಿಯನ್ನು ಮಾಡಿದನು. ತರುಣನು ದೇವರಿಗೆ ಸಾಷ್ಟಾಂಗ ನಮುಸ್ಕಾರವನ್ನು ಮಾಡಿ ಎದ್ದು ಕುಳಿತು ಕರ ಮುಗಿದು—'ದೇವಾ! ಏಕಲಿಂಗಜಿ! ನಿನ್ನ ಸಾಮರ್ಥ್ಯವು ಅಗಾಧವಾದದ್ದು ನೀನು ನಿರ್ಮಿಸಿದನ್ನು ನಾಶಮಾಡ ಬಲ್ಲೆ; ನಾಶಮಾಡಿದ್ದನ್ನು ಪುನಃ ನಿರ್ಮಿಸಬಲ್ಲೆ; ನಿನ್ನ ದಯವಿದ್ದರೆ **ಚಿತ್ತೂರು** ತಿರುಗಿ ತನ್ನ ವೈಭವವನ್ನು ಪಡೆಯುವದು ಆಶ್ಚರ್ಯವೇ?" ಎನ್ನುತ್ತಿರುವಷ್ಟರಲ್ಲಿಯೇ ಆತನು ಮೈಮರೆತು ಒರಗಿದನು. ಆಗ ಅವನಿಗೆ ಗೋಚರವಾದ ಅಂತರ್ವ್ಯಾಪಾರವೇನಂದರೆ.—'ತರುಣವೀರನು ಕರ ಜೋಡಿಸಿ ನಿಂತಿರಲು ಏಕಲಿಂಗಜಿಯು ಪ್ರತ್ಯಕ್ಷನಾಗಿ—"ವೀರ! ಸ್ವಲ್ಪ ದಿವಸಗಳಲ್ಲಿ ನಿನ್ನ ಇಚ್ಛಿತವು ಕೊನೆಗಾಣುವದು; ಭಯಪಡಬೇಡ" ಎಂದು ವರದ ಹಸ್ತವನ್ನು ತಲೆಯ ಮೇಲಿಟ್ಟನು.' ತರುಣನು ಎಚ್ಚತ್ತೊಡನೆಯೇ ಅರ್ಚಕನು ತಟ್ಟೆಯೊಳಗಿನ ಫಲಮಂತ್ರಾಕ್ಷತೆಗಳನ್ನು ಕೈಯಲ್ಲಿ ತೆಗೆದುಕೊಳ್ಳಲು ತರುಣನು ಭಕ್ತಿಯಿಂದ ತನ್ನ ಸೆಲ್ಲೆಯ

ಸೆರಗನ್ನು ಮುಂದೆ ಮಾಡಿದನು. ಅರ್ಚಕನು—"ವೀರಮಣಿ ಇಕೋ! ಇದು ಏಕಲಿಂಗಜಿಯು ವರಪ್ರದಾನದ ಕುರುಹು! ಇದರ ಮಹಿಮೆ ಯಿಂದಲೇ ಮೇವಾಡದ ಪ್ರಜೆಗಳು ಯವನರ ಕಾಟದಿಂದ ಮುಕ್ತರಾಗು ವರು. ಚಿತ್ತೂರಿನ ಉದ್ಧಾರವಾಗುವದು." ಎನ್ನುತ್ತ ಫಲಮಂತ್ರಾಕ್ಷತೆಗ ಳನ್ನು ಆತನ ಸೆರಗಿನಲ್ಲಿ ಹಾಕಿದನು. ಮತ್ತು—"ವೀರ! ನಿನ್ನಿನ ರಾತ್ರಿ ಸ್ವಪ್ನದಲ್ಲಿ ನನಗೆ ಏಕಲಿಂಗಜಿಯು ಪ್ರತ್ಯಕ್ಷನಾಗಿ 'ನಾಳಿನ ದಿವಸ ಪ್ರಾತಃ ಕಾಲದ ಪೂಜೆಯನಂತರ ಒಬ್ಬ ತರುಣ ವೀರನು ನನ್ನ ದರ್ಶನಕ್ಕೆಂದು ಬರುವನು. ಆತನಿಂದಲೇ ಮೇವಾಡದ ಉದ್ಧಾರವಾಗುವದು. ಇನ್ನು ನೀವು ಚಿಂತಿಸದಿರ್ರಿ;' ಎಂದು ಹೇಳಿದನು. ಆತನ ಆಜ್ಞೆಯಂತೆ. ಇಂದು ನೀನು ಬಂದೆ! ಮೇವಾಡವನ್ನು ಉದ್ಧಾರ ಮಾಡಿ ಅದರ ಕೀರ್ತಿಗೆ ಪಾತ್ರ ನಾಗತಕ್ಕ ನೀನು ಧನ್ಯನು!! ಏಕಲಿಂಗಜಿಯ ದೃಷ್ಟಾಂತವು ಎಂದೂ ಸುಳ್ಳು ಆಗಲಾರದು. ಅದನ್ನು ದೃಢವಾಗಿ ನಂಬು; ಯವನರನ್ನು ಹೊರಗೆ ಅಟ್ಟಲು ಪ್ರಯತ್ನಿಸು; ಅದರಲ್ಲಿ ನಿನಗೆ ನಿಶ್ಚಯವಾಗಿಯೂ ಯಶಸ್ಸು ದೊರೆ ಯುವದು" ಎಂದನು. ಪ್ರತ್ಯಕ್ಷವಾಗಿ ತನಗೂ, ಅರ್ಚಕನ ಮುಖಾಂ ತರವಾಗಿಯೂ ಏಕಲಿಂಗಜಿಯು ಅಭಯಸೂಚಕವರಪ್ರದಾನ ಮಾಡಿದ್ದ ರಿಂದ ತರುಣನಿಗೆ ಆದ ಆನಂದವನ್ನು ಹೇಳಲಾಸಲ್ಲ! ಆತನು ಉಲ್ಲಸಿತ ನಾಗಿ ಭಕ್ತಿಪರವಶತೆಯಿಂದ ಸಾಷ್ಟಾಂಗನಮಸ್ಕಾರಗಳನ್ನು ಮಾಡಿ ಫಲಮಂ ತ್ರಾಕ್ಷತೆಗಳನ್ನು ಸೆಲ್ಲೆಯ ಕೊನೆಯಲ್ಲಿ ಕಟ್ಟಿಕೊಂಡು ಹೊರಬಿದ್ದನು. ಬಳಿಕ ಅರ್ಚಕರ ಅಪ್ಪಣೆಯನ್ನು ಪಡೆದು ಮಹಾದ್ವಾರಕ್ಕೆ ಬಂದನು. ಕೂಡಲೆ ಸೇವಕನ ಕೈಯೊಳಗಿನ ಕುದುರೆಯನ್ನು ತೆಗೆದುಕೊಂಡು ಅದರ ಬೆನ್ನನ್ನು ಛಪ್ಪರಿಸಿ ಹಾರಿ ಮೇಲೆ ಕುಳಿತನು. ಬಳಿಕ ಅವನು ಕಡಿವಾಣ ವನ್ನು ಜಗ್ಗಿ ಕುದುರೆಯನ್ನು ತಿರುಗಿಸುವಾಗ ಆತನ ದೃಷ್ಟಿಯು ಮತ್ತೆ ಮಹಾದ್ವಾರದಲ್ಲಿರುವ ರಥಕ್ಕೆ ಹೊಂದಿ ನಿಂತು ಓರೆನೋಟದಿಂದ ತನ್ನನ್ನೇ ನೋಡುತ್ತಿರುವ ಆ ಸುಂದರ ತರುಣಿಯ ಕಡೆಗೆ ಹೋಯಿತು. ಆ ಸಾರೆ ಪಂಚಶರನಿಗೆ ಕೆಲಮಟ್ಟಿಗೆ ಜಯದೊರೆಯಿತು. ಅವಳ ರೂಪಕ್ಕೂ ವಿಲಾ ಸಕ್ಕೂ ತರುಣನು ಮೋಹಿತನಾದನು. ಆತನು ಕಡಿವಾಣವನ್ನು ಸಡಿಲು ಬಿಟ್ಟನು. ಕುದುರೆಯು ತನ್ನಷ್ಟಕ್ಕೆ ತಾನೇ ಹೊರಳಿ ಮಾರ್ಗ ಹಿಡಿಯಿತು.

ತರುಣನು ಗಿಡಗಳಿಂದ ಆ ಯುವತಿಯು ಮರೆಯಾಗುವವರೆಗೆ ಹೊರಳಿ ಹೊರಳಿ ನೋಡಿ ನಿರುಪಾಯನಾಗಿ ಮುಂದೆ ನಡೆದನು.

ದೇವದರ್ಶನಕ್ಕೆಂದು ದಾಸಿಯರೊಡನೆ ಬಂದ ಆ ನವಬಾಲೆಯು ತಿರುಗಿ ಹೋಗುವಾಗ ಅಂಗಣದ ಮಧ್ಯದಲ್ಲಿ ಆ ವೀರನನ್ನು ನೋಡಿ ಆತನ ಸೌರೂಪ್ಯಕ್ಕೆ ಭ್ರಾಂತಳಾದಳು. ಬಳಿಕ ಅವಳು ನಿರುಪಾಯಳಾಗಿ ಹೊರಗೆ ಬಂದು, ಆ ಕೂಡಲೆ ತನ್ನ ಸ್ಥಳಕ್ಕೆ ಹೋಗಲೊಳಸದೆ ತನ್ನ ಮನವನ್ನು ಹರಣ ಮಾಡಿದ ಆ ಸುಂದರಾಂಗನನ್ನು ಮತ್ತೊಮ್ಮೆ ನೋಡಬೇಕೆಂದು ಮಹಾ ದ್ವಾರದ ಬಳಿಯಲ್ಲಿ ಕಾದಿದ್ದಳು. ತರುಣನು ಹೊರಗೆ ಬಂದ ಕೂಡಲೆ ಆ ನವಯುವತಿಯು ಆತನ ರೂಪವನ್ನೂ ಮುಖದ ಮೇಲೆ ನಲಿದಾಡುವ ವೀರ ಶ್ರೀಯನ್ನೂ ನೋಡಿ ವಿಮೋಹಿತಳಾದಳು. ಹಾರಿಹೋಗಲು ಯತ್ನಿಸುವ ಮನವೆಂಬ ಪಕ್ಷಿಯನ್ನು ಅವಳಿಂದ ತಡೆಯುವದಾಗಲಿಲ್ಲ. ಪರಕ್ಷಣದಲ್ಲಿ ಅದು ಹಾರಿಹೋಗಿ ಆ ತರುಣನನ್ನು ಆಶ್ರಯಿಸಿತು. ಪರಸ್ಪರರ ನೇತ್ರಗಳು ಸಮ್ಮಿಲಿತವಾದಾಗಂತೂ ಅವಳ ದೇಹವು ಕಂಪಿಸತೊಡಗಿತು; ಅತ್ಯಂತ ಅಸ್ಥಿರಳಾದಳು. ಪರಕ್ಷಣದಲ್ಲಿಯೇ ಆ ತರುಣನು ಮರೆಯಾಗಲು ಅವಳು ಅತ್ಯಂತ ಕಳವಳಿಸಿದಳು. ಆದರೆ ಮಾಡತಕ್ಕದ್ದೇನು? ಕೊನೆಗೆ ಆ ಬಾಲೆ ಯು ನಿಟ್ಟುಸಿರುಬಿಟ್ಟು ಆತನ ಸಮಾಗಮಸುಖವನ್ನು ಒದಗಿಸಿಕೊಡಲು ಏಕಲಿಂಗಜಿಯನ್ನೇ ಪ್ರಾರ್ಥಿಸಿ ರಥವನ್ನು ಹತ್ತಿದಳು.

## ೨. ಪೂರ್ವವೃತ್ತಾಂತ.

ನಮ್ಮ ತರುಣವೀರನು ಮಾರ್ಗವಿಡಿದ ಬಳಿಕ ತರುಣಿಯು ಕಡೆಗೆ ಹರಿದ ತನ್ನ ಮನವನ್ನು ಬಹು ಪ್ರಯಾಸದಿಂದ ತಿರುಗಿಸಿಕೊಂಡು ಏಕಲಿಂಗಜಿಯು ವರಪ್ರದಾನವನ್ನೂ ಕಾರ್ಯಗೌರವವನ್ನೂ ನೆನಿಸುತ್ತ ಆನಂದದಿಂದ ಕುದುರೆಯನ್ನು ತೀವ್ರವಾಗಿ ನಡೆಯಿಸತೊಡಗಿದನು. ಅವನ ಸೇವಕನು ಅವನನ್ನು ಅನುಸರಿಸಿ ನಡೆದಿದ್ದನು. ಅವರಿಬ್ಬರೂ ಗುಡ್ಡವನ್ನಿಳಿದ ಬಳಿಕ ಪಶ್ಚಿಮಕ್ಕೆ ತಿರುಗಿ ಭರದಿಂದ ಸಾಗಿದರು.

ವಾಚಕ ಮಹನೀಯರೇ, ಆ ತರುಣನು ಯಾರು? ಆತನ ವೃತ್ತಾಂತ ವೇನು? ಎಂಬದನ್ನು ತಿಳಕೊಳ್ಳದೆ ಅವನ ಬೆನ್ನಹತ್ತುವದು ಹಿತಕರವಲ್ಲ. ಆದ್ದರಿಂದ ತಿರುಗಿರಿ; ಮೊದಲು ಪೂರ್ವವೃತ್ತಾಂತವನ್ನು ಅರಿತುಕೊಳ್ಳೋಣ.

ಕನ್ನಡಿಗರಲ್ಲಿ ಬಹುಜನರು ಇತಿಹಾಸ-ಐತಿಹಾಸಿಕ ಕಾದಂಬರಿಗಳಿಂದ ಚಿತ್ತೂರಿನ ಮೊದಲಿನ ಜೋಹಾರದ ಸಂಗತಿಯನ್ನು ಓದಿ ಅರಿತಿರುವರು. **ಪದ್ಮಿನಿಯ** ಆಶೆಯಿಂದ ಚಿತ್ತೂರನ್ನು ಮುತ್ತಿದ **ಅಲ್ಲಾವುದ್ದೀನನು** ರಜಪೂತರ ಯುಕ್ತಿ-ಶೌರ್ಯ-ಸಾಹಸಾದಿಗಳಿಂದ ಮೊದಲನೇ ಸಾರೆ ಸೋತು ಹಿಂದಿರುಗಿದರೂ ಮತ್ತೊಮ್ಮೆ ಬಹುದೊಡ್ಡ ದಂಡಿನೊಡನೆ ಬಂದು ಚಿತ್ತೂರನ್ನು ಮುತ್ತಿದನು. ಈ ಸಾರೆ ರಜಪೂತರು ಅಲ್ಲಾವುದ್ದೀನನಿಗೆ ಈಡಾಗದಂತಾದರು. **ರಾಣಾಲಕ್ಷ್ಮಣಸಿಂಹನು** ದೇವಿಯ ಅಪ್ಪಣೆಯಂತೆ ತನ್ನ ಪಟ್ಟದರಸಿ ಹಾಗು ಪದ್ಮಿನಿ ಸಹಿತ ಹದಿನಾರು ಸಾವಿರ ಸ್ತ್ರೀಯರನ್ನು **ಜೋಹರ** ಮಾಡಿ ಸುಟ್ಟು, ತನ್ನ ಹನ್ನೆರಡು ಜನ ಮಕ್ಕಳಲ್ಲಿ ಹನ್ನೊಂದು ಜನರನ್ನು ದಿನಕ್ಕೊಬ್ಬೊಬ್ಬನಂತೆ ಹನ್ನೊಂದು ದಿವಸ ಅವರಿಗೆ ರಣಕಂಕಣವನ್ನು ಕಟ್ಟಿ, ಸೇನಾಧಿಪತ್ಯವನ್ನು ಕೊಟ್ಟು ರಣಕ್ಕೆ ಕಳುಹಿಸಿದನು. ಅವರೆಲ್ಲರೂ ಶೂರತನದಿಂದ ಯುದ್ಧಮಾಡಿ ಮಡಿದು ವೀರಸ್ವರ್ಗವನ್ನು ಪಡೆದರು. ಲಕ್ಷ್ಮಣಸಿಂಹನು ಇನ್ನುಳಿದ ತನ್ನ ಪ್ರೀತಿಯ ಮಗನಾದ **ಅಜಯಸಿಂಹನನ್ನು** ಕರೆದು—"ಮಗನೆ, ನೀನು ನನ್ನ ವಂಶರಕ್ಷಣಕ್ಕಾಗಿ ಬದುಕಿಕೊಂಡಿರು. ನೀನು ಎಲ್ಲಿಯಾದರೂ ಗುಪ್ತವಾಗಿದ್ದು ಮೇವಾಡವನ್ನು ಪುನಃ ದೊರಕಿಸಿ ಆಳು. ಏಕಲಿಂಗಜಿಯು ನಮ್ಮ ವಂಶವಿಚ್ಛೇದನವಾಗದಂತೆ ನಿನಗೆ ಸಹಾಯಕನಾಗಿರುವನು. ಮತ್ತು ನೀನು ಮುಂದೆ ವೃದ್ಧನಾದ ಬಳಿಕ ಚಿತ್ತೂರಿನ ರಕ್ಷಣೆಗಾಗಿ ರಣಕ್ಕೆ ಬಲಿಯಾದ ನಿನ್ನ ಹಿರಿಯ ಅಣ್ಣ **ಅಮರಸಿಂಹನ** ಮಗನಾದ **ಹಮೀರಸಿಂಹನನ್ನು** ಪಟ್ಟಕ್ಕೆ ಕುಳ್ಳಿರಿಸು" ಎಂದು ಅಪ್ಪಣೆ ಮಾಡಿದನು. ಅಜಯಸಿಂಹನು ನಿರುಪಾಯನಾಗಿ ಕೆಲವು ಜನ ವೀರರೊಡನೆ ಗುಪ್ತವಾಗಿ ಕೋಟೆಯಿಂದ ಹೊರಬಿದ್ದು ಅರವಲೀ ಬೆಟ್ಟದಲ್ಲಿರುವ ಕೇಳವಾಡದಲ್ಲಿ ಇರಹತ್ತಿದನು. ಇತ್ತ ರಾಣಾಲಕ್ಷ್ಮಣಸಿಂಹನು ಹನ್ನೆರಡನೆಯ ದಿವಸ ತಾನೇ ಸರ್ವಸೇನಾಪತಿಯಾಗಿ ಪದ್ಮಿನೀಪತಿಯಾದ **ಭೀಮಸಿಂಹನೊಡನೆ** ಎಲ್ಲ ದಂಡು ಸಹಿತ ದುರ್ಗವನ್ನಿಳಿದು ಅಲ್ಲಾವುದ್ದೀನನ ಸೈನ್ಯ

ವನ್ನು ಹೊಕ್ಕನು. ಅವರೆಲ್ಲರು ಕೆಲಹೊತ್ತು ಪರಾಕ್ರಮದಿಂದ ಹೋರಾಡಿ ದೇಹವಿಟ್ಟು ವೀರಸ್ವರ್ಗವನ್ನು ಪಡೆದರು.

ಜಯಶಾಲಿಯಾದ ಅಲ್ಲಾವುದ್ದೀನನು ಕೋಟೆಯನ್ನು ಹೊಕ್ಕನು. ಅಲ್ಲಿ ತರುಣ ಸ್ತ್ರೀಪುರುಷರೊಬ್ಬರೂ ಆತನಿಗೆ ಕಾಣಲಿಲ್ಲ. ಅವನು ಆತುರ ದಿಂದ ಅರಮನೆಯನ್ನು ಹೊಕ್ಕು ಎಲ್ಲ ಕಡೆಯಲ್ಲಿಯೂ ಹುಡುಕಿದನು. ಆದರೆ ಪದ್ಮಿನಿಯು ಅವನಿಗೆಲ್ಲಿ ದೊರೆಯಬೇಕು! ಅವಳು ತನ್ನ ಸಂಗಡಿಗ ರೊಂದಿಗೆ ಸ್ವರ್ಗದಲ್ಲಿ ಕುಳಿತು ಅಲ್ಲಾವುದ್ದೀನನ ಹುಚ್ಚುತನವನ್ನು ನೋಡಿ ಹಾಸ್ಯಮಾಡುತ್ತಿರುವಳು. ಅಲ್ಲಾವುದ್ದೀನನ ದಂಡಿನವರು ಚಿತ್ತೂರಿನೊಳ ಗಿನ ಮುದುಕರನ್ನೂ ಹುಡುಗರನ್ನೂ ಕನಿಕರವಿಲ್ಲದೆ ಕೊಂದು ರಕ್ತದ ಕಾವ ಲಿಗಳನ್ನು ಹರಿಸಿದರು. ಜಯಪಡೆದರೂ ಇಚ್ಛಿತವು ಪೂರ್ಣವಾಗದ್ದಕ್ಕಾಗಿ ಹತಾಶನಾದ ಅಲ್ಲಾವುದ್ದೀನನು ಮೇವಾಡವನ್ನು ತನ್ನ ರಾಜ್ಯಕ್ಕೆ ಸೇರಿಸಿ ಅದರ ಮೇಲೆ **ಮಾಲದೇವ**ನೆಂಬ ಹಿಂದೂ ಸುಭೇದಾರನನ್ನು ನಿಯಮಿಸಿ ಉದಾಸೀನತೆಯಿಂದ ದಿಲ್ಲಿಗೆ ಹೋದನು. ರಜಪೂತನಾಗಿದ್ದರೂ ಬಾದಶ ಹನ ಚಾಕರಿಯನ್ನು ವಹಿಸಿದ ಮಾಲದೇವನು ಮೇವಾಡದ ಸುಭೇದಾರ ನಾಗಿ ಚಿತ್ತೂರಿನಲ್ಲಿ ಇರಹತ್ತಿದನು.

ಅಜಯಸಿಂಹನು ಅರವಲೀ ಬೆಟ್ಟದೊಳಗಿನ ಭದ್ರವಾದ ಕೇಳವಾಡದ ಕೋಟೆಯಲ್ಲಿದ್ದು ಭಿಲ್ಲರ ಅಧಿಪತಿಯಾದ **ಮುಂಜ**ನೆಂಬವನ ಸಹಾಯದಿಂದ ಮೇವಾಡವನ್ನು ಜಯಿಸಲಿಕ್ಕೆ ಅನುಕೂಲಕಾಲವೊದಗುವ ಹಾದಿಯನ್ನು ನೋಡುತ್ತಿದ್ದನು.

ಅಜಯಸಿಂಹನ ತರುವಾಯ ಮೇವಾಡದ ಅರಸನಾಗತಕ್ಕವನಾದ ಹಮೀರಸಿಂಹನ ವಿಷಯವಾಗಿ ಇಲ್ಲಿ ನಾಲ್ಕು ಮಾತುಗಳನ್ನು ಬರೆಯುವದು ತಕ್ಕದ್ದಾಗಿರುವದು. ರಾಣಾಲಕ್ಷ್ಮಣಸಿಂಹನ ಹಿರೇಮಗನಾದ ಅಮರಸಿಂ ಹನು ಒಂದು ದಿವಸ ಕೆಲವು ರಾಹುತರೊಡನೆ ಬೇಟೆಗೆ ಹೋಗಿದ್ದನು. ಅವರು ಅರಣ್ಯದಲ್ಲಿ ಕಾಡುಮೃಗಗಳನ್ನು ಕೊಲ್ಲುತ್ತ ನಡೆದಿರಲು ಒಂದು ಕಾಡ ಹಂದಿಯು ಅವರ ಕೈಯೊಳಗಿಂದ ಪಾರಾಗಿ ಬಂದು ಒಂದು ಜೋಳದ ಹೊಲವನ್ನು ಹೊಕ್ಕಿತು. ಅದನ್ನು ಬೆನ್ನಟ್ಟಿ ಬಂದ ಅಮರಸಿಂಹನೂ ರಾಹು ತರೂ ಹೊಲದ ದಂಡೆಯಲ್ಲಿ ನಿಂತು ಅದು ಜೋಳದಲ್ಲಿ ಯಾವಕಡೆಗೆ ಅಡಗಿ

ದೆಯೋ ಎಂದು ಚಿಂತಿಸತೊಡಗಿದರು. ಅಷ್ಟರಲ್ಲಿ ಹೊಲಕಾಯುತ್ತಿದ್ದ ತರುಣಿಯೊಬ್ಬಳು ಒಂದು ದಂಟನ್ನು ಕಿತ್ತಿ ಕುಡುಗೋಲಿನಿಂದ ಹೋಳಿನ ಮೇಲೆ ಕೊಯಿದು ಭಾಲೆಯಂತೆ ಮೊನೆಮಾಡಿಕೊಂಡು ಅದರಿಂದ ಆ ಕಾಡ ಹಂದಿಯನ್ನು ಚುಚ್ಚುತ್ತ ಹೊಲದಿಂದ ತಿರುಗಿ ಹೊರಗೆ ಹಾಕಿದಳು. ಕೂಡಲೆ ಆ ಹಂದಿಯು ಅಮರಸಿಂಹನ ಬಾಣದಿಂದ ಮೃತಪಟ್ಟಿತಾದರೂ ಅವರೆಲ್ಲರು ಆ ಬಾಲೆಯ ಸಾಹಸ-ಪರಾಕ್ರಮಗಳನ್ನು ನೋಡಿ ಬೊಟ್ಟುಕಚ್ಚಿದರು. ಅವಳು ಮುಗುಳುನಗೆ ನಗುತ್ತ ಪುನಃ ಹೊಲದಲ್ಲಿ ಹೋದಳು. ಅದರಿಂದ ನಾಚಿಕೊಂಡ ರಾಜಪುತ್ರನೂ ರಾಹುತರೂ ಕುದುರೆಯಿಂದಿಳಿದು ಒಂದು ಕಡೆಯಲ್ಲಿ ವಿಶ್ರಮಿಸುವದಕ್ಕಾಗಿ ಕುಳಿತುಕೊಂಡರು. ಮುಂದೆ ತುಸು ಹೊತ್ತಿನಲ್ಲಿಯೇ 'ಭಂವ್' ಎಂದು ಸಪ್ಪಳ ಮಾಡುತ್ತ ಒಂದು ಕಲ್ಲು ಬಂದು ಅಮರಸಿಂಹನ ಕುದುರೆಯ ಕಾಲಿಗೆ ಬಲವಾಗಿ ತಾಕಲು ಅದರ ನೋವಿನಿಂದ ಕುದುರೆಯು ಕಾಲನ್ನೆತ್ತಿಕೊಂಡು ನಿಂತಿತು. ಆಗ ಅಮರಸಿಂಹನು ಎದ್ದುನಿಂತು ನೋಡಲು, ಆ ತರುಣಿಯು ಆ ಹೊಲದಲ್ಲಿ ಮಂಚಿಗೆಯ ಮೇಲೆ ನಿಂತು ಕವಣೆಯನ್ನು ಬೀಸಿ ಹಕ್ಕಿ ಹೊಡೆಯುವದು ಅವನ ದೃಷ್ಟಿಗೆ ಬಿದ್ದಿತು. ಆ ಬಾಲಿಕೆಯಾದರೂ ಒಳ್ಳೇ ರೂಪವತಿಯಾಗಿದ್ದಳು. ಅವಳ ಸಾಹಸಪರಾಕ್ರಮಗಳಿಗೆ ಅಮರಸಿಂಹನು ಮೊದಲೇ ಮೆಚ್ಚಿದ್ದನು. ಈಗಂತೂ ಅವಳ ಮೋಹಕಸ್ವರೂಪವೂ ಮುಖದ ಮೇಲಿನ ಪರಿಹಾಸವೂ ಕುಡಿನೋಟವೂ ಅವನ ಮನಸ್ಸನ್ನು ಸಂಪೂರ್ಣವಾಗಿ ಸೆಳಕೊಂಡವು. ಅಮರಸಿಂಹನು ಅವಳನ್ನು ಲಗ್ನ ಮಾಡಿಕೊಳ್ಳಲೇ ಬೇಕೆಂದು ನಿಶ್ಚಯಿಸಿ ಚಿತ್ತೂರಿಗೆ ಬಂದು ತಂದೆಗೆ ತನ್ನ ಮನೋಗತವನ್ನು ತಿಳಿಸಿದನು. ಲಕ್ಷ್ಮಣಸಿಂಹನು ಅವಳ ಬಗ್ಗೆ ವಿಚಾರಿಸಲು ಅವಳು ರಜಪೂತರೊಳಗಿನ ಚವ್ಹಾಣಕುಲದ **ಚಾಂದಾ** ಎಂಬ ಜಮೀನದಾರನ ಮಗಳೆಂಬದು ಗೊತ್ತಾಯಿತು. ಅವಳ ಹೆಸರು ವಿಮಲೆಯು. ಬಳಿಕ ಲಕ್ಷ್ಮಣಸಿಂಹನು ಚಾಂದಾನನ್ನು ಕರೆಯಿಸಿ ಕೇಳಲು ಆತನು ಆನಂದದಿಂದ ಒಪ್ಪಿಕೊಂಡು ಅಮರಸಿಂಹನಿಗೆ ತನ್ನ ಮಗಳನ್ನು ಧಾರೆಯೆರೆದು ಕೊಟ್ಟನು. ಅಮರಸಿಂಹನು ವಿಮಲಾದೇವಿಯೊಡನೆ ಸಂಸಾರಮಾಡುತ್ತಿರಲು ಅವರಿಗೊಬ್ಬ ತೇಜಸ್ವಿಯಾದ ಮಗನು ಹುಟ್ಟಿದನು. ಆತನೇ ಹಮೀರಸಿಂಹನು. ವಿಮಲೆಯೂ ಪರಾಕ್ರಮವತಿಯು; ಅಮರ

ಸಿಂಹನಂತೂ ಹೆಸರಾದ ಶೂರನು; ಅಂದಬಳಿಕ ಅವರಿಂದ ಹುಟ್ಟಿದ ಮಗನು ಎಂಥವನಿರಬೇಕು!! ಅವನು ಅಂಜನಾಪವನರಿಂದ ಹುಟ್ಟಿದ ಹನುಮಂತನೇ ಆಗಿದ್ದನು. ಆತನು ಓದುಬರಹವನ್ನು ಎಂದೂ ಕಲಿಯಲಿಲ್ಲ. ಗೋಡೆ ಗಿಡಗಳನ್ನು ಅಡರುವದೂ, ಕುಸ್ತೀ ಹಿಡಿಯುವದೂ ಕುದುರೆಯನ್ನೇರಿ ಓಡಿಸುವದೂ, ಬೇಟೆಯಾಡುವದೂ ಅವನಿಗೆ ಹೆಚ್ಚಾಗಿ ಸೇರುತ್ತಿದ್ದವು. ಚಿಕ್ಕವನಿರುವಾಗಲೇ ತನ್ನ ಓರಿಗೆಯ ಮೂರು ನಾಲ್ಕು ಹುಡುಗರನ್ನು ಬಗಲಲ್ಲಿ ಹಿಡಿದುಕೊಂಡು ಓಡುತ್ತಿದ್ದನು. ಈ ಪ್ರಕಾರ ಜಗಜಟ್ಟಿಯಾಗಿದ್ದರೂ ಅವನು ಬಲು ಚಲುವನಾಗಿದ್ದನು. ಇದರಿಂದ ಸುವರ್ಣಕ್ಕೆ ಸುಗಂಧವು ಕೂಡಿದಂತಾಗಿತ್ತು. ಈತನ ಬಾಲಲೀಲೆಯಿಂದ ರಾಜಮನೆತನದವರೆಲ್ಲರು ಅತ್ಯಾನಂದ ಪಡುತ್ತಿದ್ದರು.

ಚಿತ್ತೂರಿನ ಕಾಳಗದ ಸಮಯದಲ್ಲಿ ಹಮೀರಸಿಂಹನಿಗೆ ಹತ್ತು ವರ್ಷಗಳಾಗಿದ್ದವು. ಆ ಕಾಳಗದಲ್ಲಿ ಮೊದಲು ಹೇಳಿದಂತೆ ಅಮರಸಿಂಹನು ಎಲ್ಲರೊಡನೆ ರಣಕ್ಕೆ ಬಲಿಯಾದನು. ವಿಮಲಾದೇವಿಯು ಸ್ತ್ರೀಯರೆಲ್ಲರೊಡನೆ ಅಗ್ನಿ ಪ್ರವೇಶವನ್ನು ಮಾಡಿದಳು. ಅಂದಿನಿಂದ ಬಾಲಕನಾದ ಹಮೀರನು ತನ್ನ ಅಜ್ಜನಾದ ಚಾಂದಾನ ಸಂರಕ್ಷಣೆಯಲ್ಲಿ ಒಬ್ಬ ಒಕ್ಕಲಿಗನ ಮಗನಂತೆ ಬೆಳೆಯುತೊಡಗಿದನು. ಚಾಂದಾನು ಚಿತ್ತೂರಿನ ನೆರೆಯಗ್ರಾಮದ ಮುಖ್ಯಸ್ಥನಾಗಿದ್ದನು.

ಹಮೀರಸಿಂಹನು ಬೆಳೆದು ದೊಡ್ಡವನಾದಂತೆ ಅವನ ಗುಣಸಾಮರ್ಥ್ಯಗಳೂ ಬೆಳೆಯು ತೊಡಗಿದವು. ಆತನು ಪ್ರೌಢನಾದ ಮೇಲೆ ಹಿರಿಯರಿಂದ ತನ್ನ ಪೂರ್ವಜರ ಚರಿತ್ರವನ್ನು ಕೇಳಿಕೊಂಡು ಮುಸಲ್ಮಾನರ ಮೇಲೆ ಕ್ರೋಧಸಂತಪ್ತನಾದನು. ಆತನು ಮೇವಾಡದ ಹೀನಸ್ಥಿತಿಯನ್ನು ನೋಡಿ ಮರುಗಿದನು. ಮುಸಲ್ಮಾನರನ್ನು ಹೊಡೆದಟ್ಟುವ ಬಗ್ಗೆ ನಿಶ್ಚಯಿಸಿದನು. ಆತನಲ್ಲಿ ಸ್ವಾಭಿಮಾನ, ಸ್ವಜನಾಭಿಮಾನ, ಸ್ವದೇಶಾಭಿಮಾನ, ಸ್ವಧರ್ಮಾಭಿಮಾನಗಳು ಕ್ರಮವಾಗಿ ತಲೆದೋರಿದವು. ಆತನ ಪರಾಕ್ರಮವು ಹೆಚ್ಚಿತು; ಕ್ಷಾತ್ರತೇಜವು ಪ್ರಕಾಶಿಸ ತೊಡಗಿತು! ಉತ್ಸಾಹವು ಇಮ್ಮಡಿಸಿತು! ಅವನ ಬಾಹುಗಳು ಸ್ಫುರಣಗೊಂಡವು!! ಆತನು ವೀರಾವೇಶದ ಭರದಿಂದ ಖಡ್ಗವನ್ನು ಹಿರಿದು ಮನೆಯಿಂದ ಹೊರಬೀಳಲುದ್ಯುಕ್ತನಾಗಲು ಚಾಂದಾನು

ಅವನನ್ನು ತಡೆದು ಸಮಾಧಾನಗೊಳಿಸಿ, ಅವನಿಗೆ ಆತನ ಕಕ್ಕನಾದ ಅಜಯ ಸಿಂಹನ ಸಂಗತಿಯನ್ನು ಹೇಳಿ ಅವನ ಸಹಾಯಕ್ಕಾಗಿ ಕೇಳವಾಡಕ್ಕೆ ಹೋಗಲು ಅಪ್ಪಣೆಕೊಟ್ಟನು. ಮರುದಿವಸವೇ ಹಮೀರನು ಒಬ್ಬ ಸೇವಕನನ್ನು ಸಂಗಡ ಕರೆದುಕೊಂಡು ಕುದುರೆಯನ್ನೇರಿ ಕೇಳವಾಡಕ್ಕೆ ಹೊರಟನು. ಮತ್ತು ನಿಶ್ಚಿತ ಕಾರ್ಯವನ್ನು ಕೈಕೊಳ್ಳುವ ಮೊದಲು ತಮ್ಮ ಕುಲದೇವತೆಯಾದ ಏಕಲಿಂಗಜಿಯ ದರ್ಶನವನ್ನು ತೆಗೆದುಕೊಳ್ಳುವದಕ್ಕಾಗಿ ಆತನು ಪ್ರಾತಃಕಾಲದ ಸಮಯದಲ್ಲಿ ಕೇಳವಾಡದ ಮಾರ್ಗದ ಸಮೀಪದಲ್ಲಿರುವ ಏಕಲಿಂಗಜಿಯ ದೇವಾಲಯಕ್ಕೆ ಬಂದನು. ಈ ಹಮೀರಸಿಂಹನೇ ನಮ್ಮ ಪೂರ್ವಪರಿಚಿತನಾದ ತರುಣವೀರನು. ಆತನು ಮೊದಲನೆಯ ಪ್ರಕರಣದಲ್ಲಿ ಹೇಳಿದಂತೆ ಏಕಲಿಂಗಜಿಯಿಂದ ಅಭಯಪ್ರದಾನವನ್ನು ಪಡೆದುಕೊಂಡು ಕೇಳವಾಡದ ಕಡೆಗೆ ನಡೆದನು. ವಾಚಕ ಮಹನೀಯರೇ, ಇನ್ನು ಹಮೀರಸಿಂಹನನ್ನು ನೋಡಿ ಮೋಹಿತಳಾದ ಆ ಬಾಲಿಕೆಯು ಯಾರೆಂದು ನೀವು ಕೇಳಬಹುದು! ಇರಲಿ, ಅವಳ ಪರಿಚಯವನ್ನು ಪ್ರಸಂಗನೋಡಿ ಮಾಡಿಕೊಡುವೆನು. ಈಗ ಮೊದಲು ಹಮೀರಸಿಂಹನೊಡನೆ ಕೇಳವಾಡಕ್ಕೆ ಹೋಗೋಣ, ಬನ್ನಿರಿ.

## ೩. ವಿಜಯತಿಲಕ.

ಕೇಳವಾಡದ ಕೋಟೆಯು ಬಲು ಭದ್ರವಾದ ಸ್ಥಳದಲ್ಲಿರುವದು. ಅದರ ಸುತ್ತಲೂ ಪರ್ವತ ಶ್ರೇಣಿಗಳು ಹಬ್ಬಿಕೊಂಡಿದ್ದು ಒಂದೇ ಕಡೆಗೆ ಮಾತ್ರ ಮಾರ್ಗವಿರುವದು. ಕೇಳವಾಡವು ಮೊದಲಿನಿಂದಲೂ ಚಿತ್ತೂರಿನ (ಮೇವಾಡದ) ಅಧಿಪತ್ಯಕ್ಕೆ ಸೇರಿರುವದು. ಅರವಲೀ ಬೆಟ್ಟದೊಳಗಿನ ಭಿಲ್ಲರ ಅಧಿಪತಿಯಾದ ಮುಂಜನೆಂಬವನು ಆ ಕೋಟೆಯಲ್ಲಿರುತ್ತಿದ್ದನು. ಮುಂದೆ ಅಜಯಸಿಂಹನು ಅಲ್ಲಿಗೆ ಬರಲು ಮುಂಜನು ತನ್ನ ಒಡೆಯನನ್ನು ಬಹು ಆದರದಿಂದ ತನ್ನಲ್ಲಿ ಭದ್ರವಾಗಿ ಇರಿಸಿಕೊಂಡನು. ಅಜಯಸಿಂಹನು ಆತನ ಸಹಾಯದಿಂದಲೇ ತನ್ನ ಸೈನ್ಯ

ವನ್ನು ಬೆಳೆಯಿಸುತ್ತ ನಡೆದಿದ್ದನು. ಮುಂಜನಿಗೆ ಅಭಿಮಾನ ಬಹಳ. ಆತನ ದುರಭಿಮಾನಕ್ಕಾಗಿಯೇ ಹಿಂದೊಮ್ಮೆ ರಾಣಾಲಕ್ಷ್ಮಣಸಿಂಹನು ಆತನನ್ನು ಕಡೆಗಣಿಸಿದ್ದನು. ಅದರಿಂದ ಮುಂಜನು ನೊಂದು ಇಲ್ಲಿರಹತ್ತಿದ್ದನು. ಚಿತ್ತೂರಿನ ರಾಣಾರ ಬಗ್ಗೆ ಅವನು ಅಷ್ಟೊಂದು ನಿಷ್ಠೆಯುಳ್ಳವನಾಗಿದ್ದಿಲ್ಲ. ಆದಾಗ್ಯೂ ಆತನು, ಅಜಯಸಿಂಹನು ತನ್ನಲ್ಲಿ ಬರಲು ಹೇಗಾದರೂ ತನ್ನ ಒಡೆಯನೆಂದೋ ಅಥವಾ ಮೋಸಸಾಧನೆಗಾಗಿಯೋ ಆತನನ್ನು ಸತ್ಕರಿಸಿ ಇಟ್ಟುಕೊಂಡಿದ್ದನು. ಆತನು ಅಜಯಸಿಂಹನನ್ನು ಪೂರ್ಣವಾಗಿ ತನ್ನ ಅಂಕೆಯಲ್ಲಿ ತಂದುಕೊಳ್ಳಬೇಕೆಂದೂ ಆ ಮೇಲೆ ಚಿತ್ತೂರಿಗೆ ದಂಡೆತ್ತಿಹೋಗಬೇಕೆಂದೂ ಮಾಡಿದ್ದನು. ಮುಸಲ್ಮಾನರ ಸುಭೇದಾರನಾದ ಮಾಲದೇವನ ಪ್ರತಿಷ್ಠೆಯೂ ಅವನಿಗೆ ಸಹನವಿದ್ದಿಲ್ಲ. ಬರಬರುತ್ತ ಮುಂಜನ ದುರಭಿಮಾನ ದುರಾಗ್ರಹಗಳಿಂದಲೂ ಅಜಯಸಿಂಹನ ನಿಶ್ಚಿತ ಸ್ವಭಾವದಿಂದಲೂ ಇಬ್ಬರಿಗೂ ಕೂಡಿ ನಡೆಯದಂತಾಗಿ ಪರಸ್ಪರರಲ್ಲಿ ವೈಮನಸ್ಸು ಉಂಟಾಯಿತು. ಕಡೆಗೆ ಅದು ವಿಕೋಪಕ್ಕೆಯೇ ಮುಟ್ಟಿತು. ಸೈನ್ಯದಲ್ಲಿಯೂ ಎರಡು ಭಾಗವಾಗಿ ಒಬ್ಬೊಬ್ಬರ ಪಕ್ಷಕ್ಕೆ ಒಂದೊಂದು ಭಾಗದಂತೆ ಸೇರಿಕೊಂಡವು. ಅಜಯಸಿಂಹನನ್ನು ಕೊಂದು ಮಾಲದೇವನನ್ನು ಸಹ ಹೊಡೆದಟ್ಟಿ ತಾನೇ ಮೇವಾಡದ ಅಧಿಪತ್ಯವನ್ನು ವಹಿಸಬೇಕೆಂಬ ದುರಾಶೆಯು ಮುಂಜನಲ್ಲಿ ಉತ್ಪನ್ನವಾಯಿತು. ಮೇವಾಡದ ರಾಜ್ಯವೇನು! ತನ್ನ ಸಾಮರ್ಥ್ಯವೇನು!! ಇದಾವದರ ಅರಿವೂ ಅವನಿಗಿದ್ದಿಲ್ಲ. ದುರಹಂಕಾರದಿಂದ ಕೂಡಿದ ಮುಂಜನು ಒಂದು ದಿನ ರಾತ್ರಿ ತನ್ನ ದಂಡಿನೊಡನೆ ಅಜಯಸಿಂಹನ ಮಂದಿರವನ್ನು ಮುತ್ತಿದನು. ದೈವಯೋಗದಿಂದ ಆ ದಿವಸ ಅಜಯಸಿಂಹನು ಆ ಮಂದಿರದಲ್ಲಿರದೆ ಯಾವದೋ ಕಾರ್ಯನಿಮಿತ್ತವಾಗಿ ಹೊರಬಿದ್ದು ಹೋಗಿದ್ದನು. ಆತನು ಮುತ್ತಿಗೆಯ ವೃತ್ತಾಂತವನ್ನು ಕೇಳಿ ತನ್ನ ಎಲ್ಲ ದಂಡಿನೊಡನೆ ಮುಂಜನ ಮೇಲೆ ಬಿದ್ದನು. ಉಭಯತರಿಗೂ ಕಾಳಗಕ್ಕೆ ಮೊದಲಾಯಿತು. ಒಂದು ಕಡೆಯಲ್ಲಿ ಶೂರರಾದ ರಜಪೂತರು; ಇನ್ನೊಂದು ಕಡೆಯಲ್ಲಿ ಕಾಡುಜನರಾದ ಭಿಲ್ಲರು. ಹೀಗಿರಲು ಮುಂಜನು ಶೌರ್ಯದಿಂದ ಸೈನ್ಯವನ್ನು ಭೇದಿಸುತ್ತ ಅಜಯಸಿಂಹನ ವರೆಗೆ ಬಂದನು. ಅವರಿಬ್ಬರಿಗೂ ಕೈಗೆಕೈ ಹತ್ತಿತು. ಇಬ್ಬರೂ

ಹೆಸರಾದ ಕಲಿಗಳು. ಬಹಳ ಹೊತ್ತು ಹೊಡೆದಾಡಿದ ಮೇಲೆ ಕಾಲಮಹಿಮೆಯಿಂದ ಮುಂಜನ ಖಡ್ಗದ ಹೊಡತವು ಅಕಸ್ಮಾತ್ತಾಗಿ ಅಜಯಸಿಂಹನ ಎಡ ಭುಜದ ಮೇಲೆ ಬಿದ್ದಿತು. ಕೂಡಲೆ ಆತನು ಕುದುರೆಯಿಂದ ನೆಲಕ್ಕುರುಳಿದನು. ಬಳಿಕ ಮುಂಜನು ಭಾಲೆಯಿಂದ ಇರಿದು ಅಜಯಸಿಂಹನನ್ನು ಪೂರ್ಣವಾಗಿ ಕೊಲ್ಲಬೇಕೆನ್ನುವಷ್ಟರಲ್ಲಿಯೇ ಯಾರೋ ಹಿಂದಿನಿಂದ ಬಂದು ಆತನ ಕುದುರೆಯ ಕಾಲನ್ನು ಕಡಿದರು. ಮುಂಜನು ಹೊರಳಿ ನೋಡಿದನು. ಅಶ್ವಾರೋಹಿಯೂ ಸುಶಸ್ತ್ರಧಾರಿಯೂ ಆದ ರಜಪೂತ ತರುಣ ವೀರನೊಬ್ಬನು ಆತನ ದೃಷ್ಟಿಗೆ ಬಿದ್ದನು. ಕೂಡಲೆ ಅವರಿಬ್ಬರಿಗೂ ಯುದ್ಧವು ನಡೆಯಿತು. ವಾಚಕ ಮಹಾಶಯರೆ! ಈತನು ನಮ್ಮ ಚಿರಪರಿಚಿತನಾದ ಹಮೀರಸಿಂಹನು. ಈತನು ಹಿಂದೆ ಹೇಳಿದಂತೆ ಕೇಳವಾಡಕ್ಕೆ ಬರುವಾಗ ತಮ್ಮ ಕಕ್ಕನೊಡನೆ ಮುಂಜನು ಯುದ್ಧಹೂಡಿದ್ದನ್ನು ಕೇಳಿ ಒತ್ತರದಿಂದ ಬಂದು ವೈರಿ ಸೈನ್ಯವನ್ನು ಹೊಕ್ಕು ಆವೇಶದಿಂದ ಯುದ್ಧಮಾಡುತ್ತ ಕಕ್ಕನಿರುವ ಸ್ಥಳದ ವರೆಗೆ ಬಂದಿದ್ದನು. ರಜಪೂತವೀರನ ಶೌರ್ಯವನ್ನು ನೋಡಿ ರಜಪೂತರಾದರೂ ಜೀವದ ಹಂಗು ದೊರೆದು ಯುದ್ಧಮಾಡಹತ್ತಿದರು. ಅಲ್ಪಾವಕಾಶದಲ್ಲಿ ಭಿಲ್ಲರು ಹೌಹಾರಿದರು. ಮೇಲೆ ಹೇಳಿದಂತೆ ಮುಂಜನಿಗೂ ಹಮೀರಸಿಂಹನಿಗೂ ಯುದ್ಧವು ಪ್ರಾರಂಭವಾದೊಡನೆಯೇ ರಜಪೂತರು ಅಜಯಸಿಂಹನನ್ನು ಸುರಕ್ಷಿತವಾಗಿ ಮಂದಿರದಲ್ಲಿ ತೆಗೆದುಕೊಂಡು ಹೋಗಿದ್ದರು. ಕೆಲಹೊತ್ತಿನ ವರೆಗೆ ಹೊಡೆದಾಡಿದ ಬಳಿಕ ಹಮೀರಸಿಂಹನು ಸಿಟ್ಟಿನಿಂದ ತನ್ನ ಕುದುರೆಯನ್ನು ಹಿಂದಕ್ಕೆ ಸರಿಸಿ, ಮತ್ತೆ ಬದಿಯಿಂದ ಮುಂಜನ ಮೇಲೆ ನೂಕಿದನು. ಹಮೀರನ ಆ ದಿವ್ಯಾಶ್ವವು ಒಡೆಯನ ಇಂಗಿತವನ್ನರಿತು ರಭಸದಿಂದ ಹಾರಿ ತನ್ನೆರಡೂ ಮುಂಗಾಲುಗಳನ್ನು ಮುಂಜನ ಕುದುರೆಯ ಬೆನ್ನಿನ ಮೇಲೆ ಊರಿತು. ಪರಕ್ಷಣದಲ್ಲಿಯೇ ಹಮೀರಸಿಂಹನು ತನ್ನ ಉದ್ದವಾದ ಖಡ್ಗವನ್ನು ಬೀಸಿ ಮುಂಜನ ಶಿರವನ್ನು ಹಾರಿಸಿದನು. ಕೂಡಲೆ ದಂಡಿನಲ್ಲಿ ಚಿತ್ತೂರಿನ ರಾಣರ ಹೆಸರಿನಿಂದ ಜಯಘೋಷವಾಯಿತು. ಭಿಲ್ಲರು ತಮ್ಮ ಶಸ್ತ್ರಗಳನ್ನಿಟ್ಟು ಹಮೀರಸಿಂಹನಿಗೆ ಶರಣು ಬಂದರು. ಬಳಿಕ ಹಮೀರಸಿಂಹನು ಮುಂಜನ ಶಿರಸ್ಸನ್ನೂ ಒರೆಗಳೆದ ಖಡ್ಗವನ್ನೂ ಹಾಗೆಯೇ ಕೈಯಲ್ಲಿ ಹಿಡಿದುಕೊಂಡು ಅಜಯಸಿಂಹನ ಮಂದಿ

ರವನ್ನು ಹೊಕ್ಕನು. ಮತ್ತು ಅಜಯಸಿಂಹನ ಎದುರಿನಲ್ಲಿ ಮುಂಜನ ಶಿರಸ್ಸನ್ನು ಇಟ್ಟು ವಂದನೆ ಮಾಡಿ ತನ್ನ ಖಡ್ಗವನ್ನು ಒರೆಗಾಣಿಸಿದನು.

ಅಜಯಸಿಂಹನು ಆನಂದಾಶ್ರುಗಳು ಉಕ್ಕಿಬರಲು ವಾತ್ಸಲ್ಯಪೂರಿತನಾಗಿ ತನಗಾದ ನೋವನ್ನು ಲೆಕ್ಕಿಸದೆ, ಎದ್ದು ಬಂದು ಮಗನನ್ನು ಅಪ್ಪಿಕೊಂಡನು. ಹಮ್ಮೀರಸಿಂಹನು 'ಗಾಯವಾಗಿದೆ ತಾವು ಏಳಬಾರದು' ಎಂದು ಹೇಳುತ್ತ ಆತನನ್ನು ಮತ್ತೆ ಮೆಲ್ಲನೆ ಹಾಸಿಗೆಯ ಮೇಲೆ ಮಲಗಿಸಿದನು. ಬಳಿಕ ಅಜಯಸಿಂಹನು ಹಮ್ಮೀರನನ್ನು ಕೈಹಿಡಿದು ತನ್ನ ಬಳಿಯಲ್ಲಿ ಕುಳ್ಳಿರಿಸಿಕೊಂಡನು. ಅಜಯಸಿಂಹನ ಹೊಟ್ಟೆಯ ಮಕ್ಕಳಾದ **ಅಜಿತಸಿಂಹ ಸಜ್ಜನಸಿಂಹ**ರೂ ನೆರೆಯಲ್ಲಿಯೇ ಕುಳಿತ್ತಿದ್ದರು. ಅವರು ಕ್ರಮದಿಂದ ಹದಿನಾರು-ಹದಿನಾಲ್ಕು ವರ್ಷದವರಾಗಿದ್ದರು.

ಅಜಯಸಿಂಹನು ಹಮ್ಮೀರನ ಮೈದಡವುತ್ತ—"ಕುಮಾರ! ಇಂದು ನೀನು ಚಿತ್ತೂರಿನ ರಾಣರ ವಿಜಯಧ್ವಜವನ್ನು ಮತ್ತೆ ಮೆರೆಯಿಸಿ ಧನ್ಯನಾದೆ! ನೀನು ನಿಶ್ಚಯವಾಗಿಯೂ ನಿನ್ನ ಪೂರ್ವಜರ ವೈಭವ-ಕೀರ್ತಿಗಳನ್ನು ತಿರುಗಿ ಪಡೆಯುವೆ! ನಿನ್ನಿಂದಲೇ ಮೇವಾಡವು! ನಮ್ಮ ಮಾತೃ ಭೂಮಿಯು! ಯವನರ ಬಾಧೆಯಿಂದ ಬಿಡುಗಡೆಯಾಗ ಬಹುದು! ನಿನ್ನಿಂದಲೇ ಚಿತ್ತೂರಿನ ಉದ್ಧಾರವಾಗಬಹುದು!! ನಿನ್ನಿಂದಲೇ ರಾಣರ ವಿಜಯಭೇರಿಯು ದಶದಿಕ್ಕುಗಳನ್ನು ಭೇದಿಸುವಂತೆ ಮತ್ತೆ ಮೊಳಗಬಹುದು!!! ನಮ್ಮ ತಂದೆಯೂ ನಿನ್ನ ಅಜ್ಜಂದಿರೂ ಆದ ರಾಣಾಲಕ್ಷ್ಮಣಸಿಂಹರ ಆಜ್ಞೆಯಂತೆ ನಾನೂ ಮೇವಾಡದ ಉದ್ಧಾರಕ್ಕಾಗಿ ಯತ್ನಿಸಿದೆನು. ಆದರೆ ನನ್ನ ದುರ್ದೈವದಿಂದ ನಮ್ಮ ಮಾತೃಭೂಮಿಯನ್ನು ಉದ್ಧರಿಸಿದ ಕೀರ್ತಿಯು ನನ್ನ ಪಾಲಿಗೆ ಬರಲಿಲ್ಲ. ನಾನು ಹೀಗೆಯೇ ಹೋಗಬೇಕಾಯಿತು. ಇರಲಿ, ನೀನಾದರೂ ಯತ್ನಿಸಿ ಈ ಕಾರ್ಯವನ್ನು ಮಾಡಿ ಕೀರ್ತಿಯನ್ನು ಪಡೆ. ಇದರಿಂದ ಪರಲೋಕದಲ್ಲಿರುವ ನಿನ್ನ ಹಿರಿಯರು ನಿನ್ನನ್ನು ಆಶೀರ್ವದಿಸುವರು. ಕುಮಾರ! ಚಿತ್ತೂರಿನ ಉದ್ಧಾರವು ನಿನ್ನಿಂದಲೇ ಆಗುವದೆಂದು ನನ್ನ ಮನೋದೇವತೆಯು ಪುನಃ ಪುನಃ ಹೇಳುತ್ತಿರುವದು. ಆದ್ದರಿಂದ ನನ್ನ ತರುವಾಯ ಮೇವಾಡದ ಅಧಿಪತ್ಯವನ್ನು ನಿನಗೇ ಕೊಟ್ಟಿದ್ದೇನೆ. ನನ್ನ ಮಕ್ಕಳಿದ್ದರೂ ಅವರು ನಿನ್ನಂತೆ ಶೂರರೂ ಚತುರರೂ ಅಲ್ಲ. ಹಾಗೂ

ನೀನು ನನ್ನ ಅಣ್ಣನ ಮಗನಾದ್ದರಿಂದ ಸಿಂಹಾಸನಕ್ಕೆ ಹಕ್ಕುದಾರನೂ ಆಗಿರುವೆ. ನೀನು ಅರಸನಾಗುವದರಿಂದಲೇ ರಾಣಾಲಕ್ಷ್ಮಣಸಿಂಹರ ಇಚ್ಛಿತಪಾದರೂ ಪೂರೈಸಲ್ಪಟ್ಟಂತಾಗುವದು." ಅಜಯಸಿಂಹನ ಗಾಯಗಳ ವೇದನೆಯು ಹೆಚ್ಚಾದ್ದರಿಂದ ಮುಂದೆ ಅವನಿಗೆ ಬಹಳ ಮಾತಾಡುವದಾಗಲಿಲ್ಲ. ಬಳಿಕ ಅವನು ತನ್ನ ಖಡ್ಗವನ್ನು ಹಮೀರಸಿಂಹನ ಕೈಯಲ್ಲಿ ಕೊಟ್ಟು— "ಕುಮಾರ! ಇದು ವಂಶಪರಂಪರವಾಗಿ ಬಂದ ರಾಣಾರವರ ಖಡ್ಗವು. ಇದರ ಮರ್ಯಾದೆಗೆ ಕುಂದುಬಾರದಂತೆ ವರ್ತಿಸು, ಮತ್ತು ಇಂದು ನೀನು ಮುಂಜನನ್ನು ಕೊಂದು ಪ್ರಥಮವಿಜಯವನ್ನು ಪಡೆದದ್ದರಿಂದ ನಿನ್ನ ಹಣೆಗೆ ವಿಜಯತಿಲಕವನ್ನಿಡುವೆನು. ಬಾ" ಎಂದು ಮುಂಜನ ರುಂಡದಲ್ಲಿ ಬೊಟ್ಟನ್ನೆದ್ದಿ ಹಮೀರಸಿಂಹನ ಹಣೆಗೆ ತಿಲಕವನ್ನಿಟ್ಟನು.

ಈ ಅಪೂರ್ವ ಸುಯೋಗವನ್ನು ನೋಡುತ್ತಿದ್ದ ಸರದಾರರ ಕಣ್ಣುಗಳಿಂದ ಆನಂದಾಶ್ರುಗಳು ಹೊರಚಿಮ್ಮಿದವು. ಅವರು ಜಯಘೋಷವನ್ನು ಮಾಡುತ್ತ ತಮ್ಮ ಪ್ರಭುವಾದ ಹಮೀರಸಿಂಹನನ್ನು ವಂದಿಸಿದರು. ಸೈನ್ಯದೊಳಗಿನ ಭಿಲ್ಲರೂ ರಜಪೂತರೂ ಭೇದಾಭೇದವಿಲ್ಲದೆ ಬಂದು ಒಡೆಯನನ್ನು ಕಾಣಿಸಿಕೊಂಡು ನಮಿಸಿದರು. ಬಳಿಕ ಹಮೀರಸಿಂಹನು ಕಕ್ಕನನ್ನೂ ಸರದಾರ-ಸೈನಿಕರನ್ನೂ ಉದ್ದೇಶಿಸಿ ನುಡಿದದ್ದೇನಂದರೆ.—"ಹಿರಿಯರೇ ಸರದಾರರೇ ನಾನು ನಿಮ್ಮ ಅಪ್ಪಣೆಯನ್ನು ಮೀರದವನಾಗಿ ರಾಣಾಲಕ್ಷ್ಮಣಸಿಂಹರ ಆಜ್ಞೆಯನ್ನು ಕೊನೆಗಾಣಿಸುವ ಅಂದರೆ ಚಿತ್ತೂರನ್ನು ಉದ್ಧರಿಸುವ ಮಹಾಕಾರ್ಯಕ್ಕೆ ಕೈಹಾಕುವೆನು. ಈ ಘನಘೋರ ಕಾರ್ಯವನ್ನು ನೆರವೇರಿಸಲು ನಾನೆಷ್ಟರವನು! ನನ್ನಿಂದೇನಾಗುವದು!! ಆದಾಗ್ಯೂ ತಮ್ಮೆಲ್ಲರ ಬಲದ ಮೇಲೆ ನಂಬಿಗೆಯನ್ನಿಟ್ಟು, ಕೈಕೊಂಡ ಈ ಕಾರ್ಯವು ಕೊನೆಗಾಣುವದೆಂದೇ ನನ್ನ ಮನದ ಅಭಿಪ್ರಾಯವು. ಏಕಲಿಂಗಜಿಯ ದಯದಿಂದಲೂ ಹಿರಿಯರ ಆಶೀರ್ವಾದದಿಂದಲೂ ತಮ್ಮೆಲ್ಲರ ಬಲದ ಸಹಾಯವು ಮಾತ್ರ ಶಾಶ್ವತವಾಗಿರಬೇಕು! ಇಂದಿನಿಂದ ನಾನು ತಮ್ಮ ಹಿತವನ್ನೂ ಚಿತ್ತೂರಿನ ಉದ್ಧಾರವನ್ನೂ ಕುರಿತು ಮನಃಪೂರ್ವಕವಾಗಿ ಯತ್ನಿಸುವೆನು" ಎಂದನು. ಸರದಾರರೂ ಸೈನಿಕರೂ ಪುನಃ ಜಯಘೋಷವನ್ನು ಮಾಡಿ ಒಡೆಯನ ಅಪ್ಪಣೆಯಂತೆ ಹೊರಟುಹೋದರು. ಅಷ್ಟರಲ್ಲಿ ಹೊರಗೆ ಬೆಳಗೆ ಬೆಳಗಾಯಿತು.

ಸೂರ್ಯದೇವನು ಉದಯಿಸಿ ಹಮ್ಮೀರಸಿಂಹನ ಪ್ರಭುತ್ವವನ್ನು ಸಾರುವವನಂತೆ ತನ್ನ ಕಿರಣಗಳನ್ನು ಪಸರಿಸುತ್ತ ಬಂದನು. ಮರುದಿವಸದ ರಾತ್ರಿ ಅಜಯಸಿಂಹನು ಈ ಲೋಕದ ಯಾತ್ರೆಯನ್ನು ಮುಗಿಸಿಕೊಂಡು ಪರಲೋಕಕ್ಕೆ ತೆರಳಿದನು. ಆತನ ಪ್ರೇತಸಂಸ್ಕಾರವು ಉಚಿತರೀತಿಯಿಂದ ನೆರವೇರಿಸಲ್ಪಟ್ಟಿತು.

## ೪. ಬೈರಾಗಿಣೀ.

ವಾಚಕ ಮಹನೀಯರೇ, ನೀವು ಎರಡನೆಯ ಪ್ರಕರಣದಲ್ಲಿ ಹಮ್ಮೀರಸಿಂಹನ ಬಾಲ್ಯಚರಿತ್ರವನ್ನು ಓದುವಾಗ ನಿಮಗೆ ಮಹಾರಾಷ್ಟ್ರ ಇತಿಹಾಸದೊಳಗಿನ **ಶಿವಾಜಿಯು** ನೆನಪಿಗೆ ಬಂದಿರಬೇಕಲ್ಲವೆ? ಹೌದು! ಯಾಕಂದರೆ, ಶಿವಾಜಿಯ ಬಾಲ್ಯದ ಒಲವುಗಳಾದರೂ ನಮ್ಮ ಹಮ್ಮೀರನ ಒಲವುಗಳಂತೆಯೇ ಇದ್ದವು. ಇಬ್ಬರೂ ಓದುಬರಹಗಳನ್ನು ಕಲಿಯದೆ ಯುದ್ಧವಿದ್ಯೆಯನ್ನೇ ಕಲಿತರು. ಇಬ್ಬರೂ ಯವನರ ಬಾಧೆಗೊಳಪಟ್ಟ ತಮ್ಮ ರಾಷ್ಟ್ರಗಳನ್ನು ಉದ್ಧರಿಸಿದರು. ರಾಷ್ಟ್ರೋದ್ಧಾರಕ್ಕಾಗಿ ಹೆಣಗುವಾಗ ಇಬ್ಬರೂ ಕೈಕೊಂಡ ಯುದ್ಧ ಪದ್ಧತಿಗಳು ಒಂದೇ ತರವಾಗಿದ್ದವು. ಹಮ್ಮೀರನು ಭಿಲ್ಲ ಜನರ ಟೋಳಿಗಳನ್ನು ಕಟ್ಟಿಕೊಂಡು ಅವುಗಳನ್ನು ಹರಿಬಿಡುತ್ತ ಪಠಾಣರ ರಾಜ್ಯದಲ್ಲಿ ಸುಲಿಗೆಯನ್ನು ನಡೆಯಿಸಿದನು. ತಕ್ಕಷ್ಟು ಜನರೂ ಧನವೂ ಸಂಗ್ರಹವಾದ ಬಳಿಕ ಮೇವಾಡದೊಳಗಿನ ಒಂದೊಂದೇ ಕೋಟೆಗಳನ್ನು ತಕ್ಕೊಳ್ಳುತ್ತ ಬಹಳ ಸೀಮೆಯನ್ನು ತನ್ನ ವಶಪಡಿಸಿಕೊಂಡನು. ಪಠಾಣರ ಹಸ್ತಕನಾದ ಚಿತ್ತೂರಿನ ಸುಭೇದಾರನ ದಂಡು ತಮ್ಮ ಮೇಲೆ ಬರಲು ಹಮ್ಮೀರನೂ ಆವನ ಭಿಲ್ಲದಂಡಾಳುಗಳೂ ಅರವಲೀ ಬೆಟ್ಟದೊಳಗೆ ಎಲ್ಲಿಯೋ ಮಾಯವಾಗಿ ಬಿಡುತ್ತಿದ್ದರು. ಆ ದಂಡು ಪುನಃ ತಿರುಗಿ ಹೋಗಹತ್ತಲು ಅವರ ಹಿಂದಿನಿಂದ ಹೋಗಿ ತ್ರಾಸಕೊಡುತ್ತಿದ್ದರು. ದಂಡಿನ ಸಣ್ಣ ಟೋಳಿಗಳು ಬಂದಾಗ ಅವುಗಳನ್ನು ನಾಶಮಾಡಿ ಬಿಡುತ್ತಿದ್ದರು. ಹೀಗೆ ಪುಂಡಾಟಿಕೆಯನ್ನು ನಡೆಯಿಸಿ ಮೂರು

ನಾಲ್ಕು ವರ್ಷಗಳಲ್ಲಿ ಅತ್ಯಂತ ಬಲಿಷ್ಠನಾದನು. ಮೇವಾಡದ ಎಷ್ಟೋ ಪ್ರಜೆಗಳು ತಮ್ಮ ಉದ್ಧಾರಕ್ಕಾಗಿ ಯತ್ನಿಸುವ ಹಮೀರನಿಗೆ ಮನಃಪೂರ್ವಕವಾಗಿ ಸಹಾಯಮಾಡತೊಡಗಿದರು. ಅಜಯಸಿಂಹನು ತೀರಿದ ನಾಲ್ಕು ವರ್ಷಗಳಲ್ಲಿ ಹಮೀರಸಿಂಹನು ಮೇವಾಡದ ಬಹು ಭಾಗವನ್ನು ವಶಮಾಡಿಕೊಂಡು ಒಂದು ಸೈನ್ಯವನ್ನು ಕೂಡಿಸಿಕೊಂಡು ಕೇಳವಾಡದಲ್ಲಿ ನಿಂತನು. ಚಿತ್ತೂರು ಮಾತ್ರ ಇನ್ನೂ ಅವನ ಕೈಸೇರಲಿಲ್ಲ. ಅಜಯಸಿಂಹನ ಹಿರೇಮಗನಾದ ಅಜಿತಸಿಂಹನು ಅಣ್ಣನ ಸಹಾಯಕನಾಗಿ ನಿಂತನು. ಸಜ್ಜನಸಿಂಹನು* ಸ್ವಾಭಿಮಾನದಿಂದ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಲಿಕ್ಕೆಂದು ದಕ್ಷಿಣದ ಕಡೆಗೆ ಹೋದನು.

ರಾಣಾಹಮೀರಸಿಂಹನು ಒಂದು ದಿನ ತನ್ನ ಮಂತ್ರಿಮಂಡಲದೊಡನೆ ಕುಶಲವಾರ್ತೆಗಳನ್ನಾಡುತ್ತ ಓಲಗದಲ್ಲಿ ಕುಳಿತಿರಲು ನೆರೆದವರಲ್ಲಿ ಬೈರಾಗಿಣಿಯ ವಿಷಯವಾಗಿ ಮಾತು ಹೊರಟಿತು. ರಾಣಾನು ಅದನ್ನು ಕೇಳುವ ಇಚ್ಛೆಯನ್ನು ತೋರಿಸಲು ಒಬ್ಬನು—" **ರಾಣಾಜಿ!** ಈಗ ಹತ್ತು ಹದಿನೈದು ದಿವಸಗಳ ಹಿಂದೆ ಈ ಊರಿಗೆ ಒಬ್ಬ ತರುಣ ವಯಸ್ಸಿನ **ಬೈರಾಗಿಣಿ**ಯು ಬಂದು ದೇವಿಯ ಗುಡಿಯಲ್ಲಿ ಇಳಿದುಕೊಂಡಿರುವಳು. ಅವಳಿಗೊಬ್ಬಳು ಶಿಷ್ಯಳಿರುವಳು. ಬೈರಾಗಿಣಿಯು ವೈದ್ಯ-ಜ್ಯೋತಿಷಗಳನ್ನು ಚನ್ನಾಗಿ ಬಲ್ಲವಳಿರುವಳು. ಅವಳು ಗಾಯಗಳಿಗೆ ಉತ್ತಮವಾದ ಮದ್ದು ಕೊಡುವಳು. ಮೊನ್ನಿನ ಯುದ್ಧದಲ್ಲಿ ಗಾಯಹೊಂದಿದ ನಮ್ಮ ದಂಡಾಳುಗಳಲ್ಲಿ ಕೆಲವರು ಆಕೆಯಿಂದ ಮದ್ದು ಹಾಕಿಸಿಕೊಂಡು ಒಂದೆರಡು ದಿವಸಗಳಲ್ಲಿಯೇ ಗುಣವಾದರು." ಎನಲು ಹಮೀರಸಿಂಹನಿಗೆ ಬಹಳ ಆಶ್ಚರ್ಯವೆನಿಸಿತು. ಅವನು ಅವಳನ್ನು ಕಾಣಲೆಳಸಿದನು. ಮತ್ತು ಅಂಥವರು ತನ್ನ ಆಶ್ರಯದಲ್ಲಿರುವದು ಲಾಭಕರವೆಂದು ಅವಳನ್ನು ಅರಮನೆಗೆ ಕರೆಯಿಸಿಕೊಂಡನು. ಮತ್ತು ಅವಳ ವಿನಯಾದಿಸದ್ಗುಣಗಳಿಗೂ ವಾಕ್ಚತುರತನಕ್ಕೂ ಮೆಚ್ಚಿ ಆತನು ಪ್ರತಿದಿವಸವೂ ಅವಳ ಹತ್ತರ ಹೋಗಿ ಕೂತು ಬೇರೆ ಬೇರೆ ವಿಷಯಗಳ ಬಗ್ಗೆ ಮಾತಾಡಿ ಬರುತ್ತಿದ್ದನು. ಆಕೆಯ ರೂಪತೇಜಸ್ಸುಗಳನ್ನು

* ಮಹಾರಾಷ್ಟ್ರ ರಾಜ್ಯಸ್ಥಾಪಕನಾದ ಶಿವಾಜಿಯು ಈ ಸಜ್ಜನಸಿಂಹನ ವಂಶದವನೆಂಬದಕ್ಕೆ ಚಿತ್ತೂರಿನ ರಾಜವಂಶಾವಳಿಯಲ್ಲಿ ಸಬಲವಾದ ಪ್ರಮಾಣಗಳಿರುವವಂತೆ.

ನೋಡಿ ಆತನು ಒಮ್ಮೊಮ್ಮೆ ಇವಳು ಬೈರಾಗಿಣಿಯಾಗಿರದೆ ರಾಜವಂಶದಲ್ಲಿ ಹುಟ್ಟಿದವಳೇ ಆಗಿರಬಹುದೆಂದು ತರ್ಕಿಸುತ್ತಿದ್ದನು. ಆದರೂ ಆತನು ಅದನ್ನು ವಿಚಾರಿಸುವ ಗೊಡವೆಗೆ ಹೋಗಲಿಲ್ಲ. ಬರಬರುತ್ತ ಬೈರಾಗಿಣಿಯ ವೈದ್ಯವಿದ್ಯೆ, ಜ್ಯೋತಿಷಗಳ ಬಗ್ಗೆ ರಾಣಾನ ನಂಬಿಗೆಯು ದೃಢವಾಯಿತು. ಅವಳ ಸಂಗಡ ಸಲಿಗೆಯಿಂದ ಮಾತಾಡತೊಡಗಿದನು. ಮುಂದೆ ಬೈರಾಗಿಣಿಯು ಪ್ರತಿಯೊಂದು ಮಾತನ್ನು ನಂಬುತ್ತಿದ್ದನಲ್ಲದೆ ಅವಳ ಮನಸ್ಸಿನ ವಿರುದ್ಧವಾಗಿ ಹೋಗದಂತಾದನು. ಇದೇ ಬಗೆಯಾಗಿ ಒಂದು ತಿಂಗಳ ಕಾಲವು ಕಳೆದು ಹೋಯಿತು. ಒಂದು ದಿನ ಬೈರಾಗಿಣಿಯು ಭೋಜನವನ್ನು ತೀರಿಸಿಕೊಂಡು ಶಿಷ್ಯಳೊಡನೆ ಮಾತಾಡುತ್ತ ಕುಳಿತ ಕಾಲದಲ್ಲಿ ಹಮೀರಸಿಂಹನು ಅಲ್ಲಿಗೇ ಬಂದನು. ಬೈರಾಗಿಣಿಯು ಮರ್ಯಾದೆಯಿಂದ ಕರೆದು ಕೂಡಿಸಿದಳು.

**ಬೈರಾಗಿಣಿ.**—ರಾಣಾಜಿ! ಇಂದು ನಾನು ತಮಗೊಂದು ಮಹತ್ವದ ಸುದ್ದಿಯನ್ನು ಹೇಳಬೇಕಾಗಿದೆ. ಆದರಿಂದ ತಮ್ಮ ಮಾರ್ಗವನ್ನು ನೋಡುತ್ತಿದ್ದೆನು. ತಾವೇ ಅಕಸ್ಮಾತ್ತಾಗಿ ಬಂದದ್ದು ಸುಯೋಗವೇ ಸರಿ. ಬೇಕಾದರೆ ಅದನ್ನು ತಿಳಿಸುವೆನು.

**ರಾಣಾ.**—ನಾನು ಅದನ್ನು ಕೇಳಲು ಅತ್ಯಂತ ಕುತೂಹಲವುಳ್ಳವನಾಗಿದ್ದೇನೆ.

**ಬೈರಾಗಿಣಿ.**—ನಾನು ನಿನ್ನಿನ ರಾತ್ರಿ ನಿದ್ರೆ ಬಾರದೆ ಜ್ಯೋತಿಷ್ಯದಲ್ಲಿ ಅನೇಕ ಪ್ರಶ್ನಗಳನ್ನು ಹಾಕುತ್ತ ತಾವು ಕೈಕೊಂಡ ಕಾರ್ಯದ ಭವಿಷ್ಯವನ್ನು ಸಂಗ್ರಹಿಸಿರುವೆನು. ಅದರ ಸಾರಾಂಶವನ್ನೇ ಈಗ ತಮಗೆ ತಿಳಿಸಬೇಕೆಂದಿರುವೆನು.

**ರಾಣಾ.**—ಅದೇನು? ನಮ್ಮ ಕಾರ್ಯವು ಹೇಗೆ ಯಶಸ್ವಿಯಾಗುವದು?

**ಬೈರಾಗಿಣಿ.**—ತಮ್ಮ ಕಾರ್ಯವು ಯಶಸ್ವಿಯಾಗುವದು ನಿಶ್ಚಯವು. ಚಿತ್ತೂರು ತಮ್ಮ ಕೈಸೇರುವದು. ಆದರಲ್ಲಿ ಒಬ್ಬ ತರುಣಿಯು ತಮಗೆ ಬಹಳ ಉಪಯೋಗ ಬೀಳುವಳು. ಅವಳು ಸಾಮಾನ್ಯಳಲ್ಲ; ಸತ್ಕುಲದಲ್ಲಿ ಹುಟ್ಟಿದವಳೂ ವೀರಪುತ್ರಿಯೂ ಆಗಿರುವಳು. ಅವಳೇ ಮುಂದೆ

ತಮ್ಮ ಪಟ್ಟದರಸಿಯಾಗುವಂತೆ ಬ್ರಹ್ಮನ ಸಂಕೇತವಿರುವದು. ಅವಳು ತಮ್ಮ ಸಹಾಯಾರ್ಥವಾಗಿ ತಾನಾಗಿಯೇ ಇಂದು ಇಲ್ಲಿಗೆ ಬರುವಳು. ತಾವು ಅವಳನ್ನು ಪರಿಗ್ರುಹಿಸಬಹುದಲ್ಲವೆ?

**ರಾಣಾ.**—(ವಿಚಾರದಲ್ಲಿ ಬೀಳುವನು.)

**ಬೈರಾಗಿಣಿ.**—ಆ ತರುಣಿಯು ತಮಗೆ ಕೇವಲ ಅಪರಿಚಿತಳಲ್ಲ! ಅವಳ ಹಾಗು ತಮ್ಮ ಮೊದಲನೆಯ ಭೆಟ್ಟಿಯು ಏಕಲಿಂಗಜಿಯ ದೇವಾಲಯದಲ್ಲಿಯೇ ಆಗಿರುವದು. ಅಂದಿನಿಂದ ಅವಳು ತಮ್ಮಲ್ಲಿ ಅನುರಾಗಬದ್ಧಳಾಗಿ ತಮ್ಮ ಪಾದಧ್ಯಾನವನ್ನೇ ಮಾಡುತ್ತ ಕಾಲಕಳೆಯುತ್ತಿರುವಳು. ಈಗ ತಮ್ಮ ಸೇವೆಗೆಂದು ಮನಃಪೂರ್ವಕವಾಗಿ ಹೊರಟು ಗುಪ್ತರೀತಿಯಿಂದ ಇಂದು ಸಂಜೆಗೆ ಇದೇ ಸ್ಥಳದಲ್ಲಿ ಬರುವಳು. ಯಾಕೆ! ಪರಿಗ್ರುಹಿಸಬಹುದಲ್ಲವೇ?

ಹಿಂದೊಮ್ಮೆ ದೇವಾಲಯದಲ್ಲಿ ಒಬ್ಬ ನವಸುಂದರಿಯ ದರ್ಶನವಾದದ್ದು ಬೈರಾಗಿಣಿಯ ಮಾತಿನಿಂದ ರಾಣಾನ ಸ್ಮರಣದಲ್ಲಿ ಬಂದ ಕೂಡಲೆ ಆತನ ಮುಖವು ಉಲ್ಹಸಿತವಾಯಿತು. ದೇಹವು ಪರವಶವಾದಂತಾಯಿತು. ಅದೇ ಸ್ತ್ರೀಯಳು ಇಂದು ತಾನಾಗಿ ಬರುವಳೆಂಬದನ್ನು ಕೇಳಿ ಆತನು ಅತ್ಯಂತ ಆನಂದಗೊಂಡನು. ಕೂಡಲೆ ಆತನು ಬೈರಾಗಿಣಿಯ ಪ್ರಶ್ನಕ್ಕೆ ಉತ್ತರವಾಗಿ—“ಓಹೊ!! ಅಂಥ ಸುರಸುಂದರಿಯು ಅನುರಾಗಬದ್ಧಳಾಗಿ ತಾನಾಗಿಯೇ ಬರುತ್ತಿರಲು ಅವಳನ್ನು ತಿರಸ್ಕರಿಸುವಷ್ಟು ಮೂಢನು ನಾನಲ್ಲ” ಎಂದು ನಗುನಗುತ್ತ ನುಡಿದನು. ಬೈರಾಗಿಣಿಯು ತನಗುಂಟಾದ ಅತ್ಯಂತ ಆನಂದವನ್ನು ಹೊರಗೆ ತೋರ್ಪಡಿಸದೆ—“ಹಾಗಾದರೆ ಅರ್ಧತಾಸು ರಾತ್ರಿಯಾದ ಮೇಲೆ ತಾವು ಇದೇ ಸ್ಥಳಕ್ಕೆ ಬಂದರೆ ಅವಳನ್ನು ಕಾಣುವಿರಿ” ಎಂದನು. ರಾಣಾನು ಅದಕ್ಕೆ ಒಪ್ಪಿಕೊಂಡು ಅವಳ ಅಪ್ಪಣೆಯಿಂದ ಹೊರಟು ಹೋದನು. ಇತ್ತ ಬೈರಾಗಿಣಿಯು ತನ್ನ ಇಚ್ಛಿತವನ್ನು ನೆರವೇರಿಸಿಕೊಳ್ಳುವ ಸಿದ್ಧತೆಯಲ್ಲಿ ತೊಡಗಿದಳು.

ಇತರ ವಿಷಯಗಳ ಕಡೆಗೆ ರಾಣಾನ ಮನಸ್ಸು ಇಲ್ಲದಂತಾಯಿತು. ಬಹಳ ದಿವಸಗಳ ಹಿಂದೆ ನೋಡಿದ ಆ ಯುವತಿಯ ಮನೋಹರ ಮೂರ್ತಿಯು ಹಮೀರಸಿಂಹನ ಅಂತರ್ದೃಷ್ಟಿಯಲ್ಲಿ ಮೂಡಿ ಬಿಟ್ಟಿತು. ಆತನು ಅವಳ

ಪ್ರತ್ಯಕ್ಷದರ್ಶನವನ್ನು ಪಡೆಯಲು ಆತುರನಾಗಿ ಸಾಯಂಕಾಲವನ್ನು ಎದುರುನೋಡುತ್ತಿದ್ದನು. ಆತನಿಗೆ ಹೊತ್ತು ಹೋಗದಂತಾಯಿತು. ಓಲಗಕ್ಕಾದರೂ ಹೋಗಲು ಮನಸ್ಸಿಲ್ಲದವನಾದನು. ಕಡೆಗೆ ಅವನು ಉದ್ಯಾನದಲ್ಲಿ ಅಡ್ಡಾಡುತ್ತ ನಡೆದನು. ಎಲ್ಲಿ ಹೋದರೂ ಅವನ ಮನದಲ್ಲಿ ತನ್ನ ಮನೋರಮೆಯ ಸಂದರ್ಶನದ ಸುಖಮಯ ಕಲ್ಪನೆಯೇ ನಡೆದಿತ್ತು. ಒಮ್ಮೆ ಆ ಯುವತಿಯ ಹಾಗು ವೈರಾಗಿಣಿಯ ಹೋಲಿಕೆಗಳು ಒಂದೇ ಇರುವದರಿಂದ ಎಲ್ಲಿ ಅವಳೇ ವೈರಾಗಿಣಿಯ ವೇಷದಿಂದ ಬಂದಿರುವಳೋ ಏನೋ ಎಂದು ಕಲ್ಪಿಸುವನು. ಏನೇ ಆಗಲಿ ಸಾಯಂಕಾಲಕ್ಕೆ ಹೋಗಿ ನಿಜವನ್ನು ಕಾಣಬೇಕೆಂದು ನಿಶ್ಚಯಿಸಿ ಹಾಗೂ ಹೀಗೂ ಹೊತ್ತುಗಳೆದು ನಿಯಮಿತ ವೇಳೆಗೆ ವೈರಾಗಿಣಿ ಇರುವ ಮಂದಿರದ ಬಾಗಿಲಿಗೆ ಬಂದು ನಿಂತನು. ಅಹಹಾ! ಇದೇನು? ವೈರಾಗಿಣಿಯ ಮಂದಿರವೇ? ಅಲ್ಲ! ವಿಲಾಸಿನಿಯರ ವಿಲಾಸ ಮಂದಿರವು!! ವೈರಾಗಿಣಿಯ ಶಾಟಿಯೂ ಕಮಂಡಲಜಪಮಾಲೆಗಳೂ ಮಾತ್ರ ಗಂಟುಕಟ್ಟಿ ಗೂಟಕ್ಕೆ ಹಾಕಲ್ಪಟ್ಟವೆ. ಹಾಗಾದರೆ ಇದು ಮೊದಲು ವೈರಾಗಿಣಿಯ ಮಂದಿರವೇ ಹೌದು!!! ಆ ಮಂದಿರದಲ್ಲಿ ಹಮೀರಸಿಂಹನು ದೇವಾಲಯದಲ್ಲಿ ನೋಡಿದ ನವತರುಣಿಯು ಅಲಂಕೃತಳಾಗಿ ಲಜ್ಜಾವನತ ಮುಖಿಯಾಗಿ ಮಂದಹಾಸಗೈಯುತ್ತ ನಿಂತಿದ್ದಳು. ಅವಳನ್ನು ನೋಡಿದೊಡನೆಯೇ ರಾಣಾನು ಪರವಶನಾದನು. ಪ್ರೇಮ ಪೂರ್ಣವಾದದೃಷ್ಟಿಯಿಂದ ಅವಳನ್ನು ಒಂದೇ ಸವನೆ ನೋಡುತ್ತಿದ್ದನು. ಆ ತರುಣಿಯಾದರೂ ಓರೆ ನೋಟದಿಂದ ತನ್ನ ಮನೋಹರನನ್ನು ಕದ್ದು ನೋಡುತ್ತಿದ್ದಳು. ಕ್ಷಣಕಾಲ ಯಾರ ಬಾಯಿಂದಲೂ ಮಾತು ಹೊರಡಲಿಲ್ಲ. ಬಳಿಕ ಹಮೀರಸಿಂಹನೇ ದಾಸಿಯನ್ನು (ಇವಳು ಮೊದಲು ಗಂಗೆಯೆಂಬ ಹೆಸರಿನಿಂದ ವೈರಾಗಿಣಿಯ ಶಿಷ್ಯಳು.) ಕುರಿತು—"ಗಂಗೆ, ಇದೇನು? **ಬೂದಿಯೊಳಗಿನ ಬಂಗಾರವು** ಹೊರಬಿದ್ದು ಶೋಭಿಸುತ್ತಿರುವದಲ್ಲ" ಎಂದನು. ಅದಕ್ಕೆ ಚತುರಳಾದ ಆ ದಾಸಿಯು—"ಹೌದು! ಬೂದಿಯಲ್ಲಿದ್ದದ್ದು ಬಂಗಾರವೆಂಬದು ಈ ವರೆಗೂ ತಿಳಿಯದಿದ್ದದ್ದು ಆಶ್ಚರ್ಯವಲ್ಲವೆ?" ಎಂದಳು. ಅದಕ್ಕೆ ಏನುತ್ತರ ಕೊಡಬೇಕೆಂಬದು ರಾಣಾನಿಗೆ ತಿಳಿಯದಂತಾಯಿತು. ಇದನ್ನು ತಿಳಿದು ಆ ತರುಣಿಯು ಮುಗುಳುನಗೆ ನಕ್ಕು ತನ್ನ ಪ್ರಾಣೇಶ್ವರನು ಹೀಗೆ

ಸೋಲುವದು ಸಹನವಾಗದೆ—“ಸುವರ್ಣವೆಂದು ತಿಳಿದರೂ ಒಮ್ಮಿಂದೊಮ್ಮೆ ಮನಸೋಲದಿರುವದು ಚಿತ್ತೂರಿನ ರಾಣಾರವರ ಸಹಜ ಧರ್ಮವೇ ಸರಿ” ಎಂದಳು.

ಈಗಂತೂ ಹಮೀರಸಿಂಹನಿಂದ ಮನದ ಆತುರತೆಯನ್ನು ತಡೆಯುವದಾಗಲಿಲ್ಲ. ಆತನು ಆನಂದ ಪರವಶನಾಗಿ ಭರದಿಂದ ಮುಂದೆ ಬಂದನು. ಅತ್ಯಂತ ಅಸ್ಥಿರಳಾದ ಆ ತರುಣಿಯು ಕೂಡಲೆ ಆತನನ್ನು ಅಪ್ಪಿಕೊಂಡಳು. ಕೆಲಹೊತ್ತಿನ ಮೇಲೆ ಹಮೀರಸಿಂಹನು ಅವಳ ಬಾಹುಬಂಧನದೊಳಗಿಂದ ಪಾರಾಗಿ ನೆರೆಯ ಆಸನದ ಮೇಲೆ ಕುಳಿತನು. ಆ ತರುಣಿಯೂ ನೆರೆಯಲ್ಲಿಯೇ ಅಧೋಮುಖಳಾಗಿ ಕುಳಿತಳು. ಬಳಿಕ ರಾಣಾನು—“ಗಂಗೆ! ಹೀಗೆ ವೇಷಾಂತರದಿಂದ ಸಾಹಸ ಮಾಡಿ ಬರಲು ಕಾರಣವೇನು?” ಎಂದು ಕೇಳಿದನು. ಅದಕ್ಕೆ ಗಂಗೆಯು—“ರಾಣಾಜಿ! ಈ ನಮ್ಮ **ಊರ್ಮಿಳಾದೇವಿ**ಯೂ ನಾನೂ ಏಕಲಿಂಗಜಿಯ ದರ್ಶನಕ್ಕೆ ಬಂದಾಗ ದೇವಿಯು ತಮ್ಮನ್ನು ನೋಡಿ ಮೋಹಿತಳಾದಳು. ಮುಂದೆ ತಮ್ಮ ಚಿಂತೆಯಲ್ಲಿಯೇ ಕೊರಗಹತ್ತಿದಳು. ಆಗ ನಾನು ಸಾಹಸದಿಂದ ತಮ್ಮ ಶೋಧವನ್ನು ಮಾಡಿದೆನು. ಆದರೆ ದೇವಿಯ ತಂದೆಯವರಾದ ಮಾಲದೇವರಿಗೂ ತಮಗೂ ಕದನಗಳೇ ನಡೆಯುತ್ತಲಿರುವವಾದ್ದರಿಂದ ದೇವಿಯ ಇಚ್ಛೆಯು ಸುಲಭವಾಗಿ ಕೈಗೂಡುವಂತೆ ತೋರಲಿಲ್ಲ. ಅದರಿಂದ ಅವರು ಒಂದು ದಿವಸ ತಮ್ಮ ತಂದೆಯವರಿಗೆ ಭೆಟ್ಟಿಯಾಗಿ “ನಾವು ಹಿಂದುಗಳಾಗಿದ್ದು ಮುಸಲ್ಮಾನರ ಸೇವೆಗಾಗಿ ಸ್ವಕೀಯರನ್ನು ಘಾತಿಸುವದು ಪಾಪದಾಯಕವು. ಆದ್ದರಿಂದ ಚಿತ್ತೂರನ್ನು ರಾಣಾರ ವಂಶಜರಿಗೆ ಒಪ್ಪಿಸಿ ಅವರ ಸೇವೆಯನ್ನು ಕೈಕೊಳ್ಳುವದು ಯೋಗ್ಯವು” ಎಂದು ಹೇಳಿದರು. ಅದಕ್ಕೆ ಮಾಲದೇವರು ಸಿಟ್ಟಿನಿಂದ ಊರ್ಮಿಳಾದೇವಿಯವರ ಅಭಿಪ್ರಾಯವನ್ನು ತಿರಸ್ಕರಿಸಿದರು. ಇಷ್ಟೇ ಅಲ್ಲದೆ ಅವರು ದೇವಿಯನ್ನು ಬುಂದಿಯ ರಾಜಪುತ್ರನಿಗೆ ಮದುವೆ ಮಾಡಿಕೊಡುವ ಯತ್ನವನ್ನು ನಡೆಯಿಸಿದರು. ಅದನ್ನು ತಪ್ಪಿಸಿಕೊಳ್ಳುವದಕ್ಕಾಗಿಯೂ, ಚಿತ್ತೂರನ್ನು ವಶಪಡಿಸಿಕೊಳ್ಳುವ ತಮ್ಮ ಸಹಾಯ ಸೇವೆಯನ್ನು ಕೈಕೊಳ್ಳುವದಕ್ಕಾಗಿಯೂ ತಮ್ಮ ಅಡಿಗಳನ್ನು ಕಾಣುವದಕ್ಕಾಗಿಯೂ ಈ ವೇಷದಿಂದ ಸಾಹಸ ಮಾಡಿ ಬರಬೇಕಾಯಿತು” ಎಂದಳು. ಹಮೀರಸಿಂಹನು ಪ್ರೇಮಪೂರ್ಣ

ವಾದ ದೃಷ್ಟಿಯಿಂದ ಉರ್ಮಿಳೆಯನ್ನು ನೋಡಿ ಆದರಿಸಿದನು. ಮತ್ತು ಆತನು—"ಹಾಗಾದರೆ ನಿವ್ಮೊಡತಿಯು ಇನ್ನೂ ಕೆಲವು ದಿವಸ ಗುಪ್ತವಾಗಿಯೇ ಇರಬೇಕಾಗುವದು" ಎಂದನು.

**ಉರ್ಮಿಳೆ.**—ಹೌದು ನಾನು ಚಿತ್ತೂರು ತಮ್ಮ ಕೈಸೇರುವ ವರೆಗೆ ಬೈರಾಗಿಣಿಯ ವೇಷದಿಂದಲೇ ಇರತಕ್ಕವಳು.

**ರಾಣಾ.**—ಸರಿ. ನಾನಾದರೂ ಚಿತ್ತೂರಿನ ಉದ್ಧಾರವಾಗುವ ವರೆಗೆ ಅನ್ಯವಿಷಯಗಳ ಕಡೆಗೆ ಲಕ್ಷಕೊಡಲಿಕ್ಕಿಲ್ಲೆಂದು ನಿಶ್ಚಯಿಸಿದ್ದೇನೆ. ಇರಲಿ, ಈಗ ಹೋಗಿ ಬರುವೆನು. ನಾಳೆ ಮತ್ತೆ ಬಂದು ಭೆಟ್ಟಿಯಾಗುವೆನು. ಸ್ವೀಕೃತ ಕಾರ್ಯದ ಬಗ್ಗೆ ಆಲೋಚಿಸೋಣ.

ಹಮೀರಸಿಂಹನು ಎದ್ದು ಹೊರಟು ಹೋದನು. ಇತ್ತ ಉರ್ಮಿಳೆಯು ಬೈರಾಗಿಣಿಯಾದಳು. ಗಂಗೆಯು ಅವಳ ಶಿಷ್ಯಳಾದಳು. ವಾಚಕ ಮಹನೀಯರೆ, ನೀವು ಮೊದಲೇ ಕಂಡ ನವಬಾಲೆಯ ಸಂಪೂರ್ಣಪರಿಚಯವಾದಂತಾಯಿತು. ಲಕ್ಷದಲ್ಲಿಡಿರಿ.

## ೫. ಯುದ್ಧಚಾತುರ್ಯವು.

ಹಮೀರಸಿಂಹನು ಪ್ರತಿದಿವಸ ಬೈರಾಗಿಣಿಯ ಬಳಿಗೆ ಬಂದು ಚಿತ್ತೂರನ್ನು ವಶಪಡಿಸಿಕೊಳ್ಳುವ ಬಗ್ಗೆ ಆಲೋಚನೆಯನ್ನು ಮಾಡುತ್ತಿದ್ದನು. ಬೈರಾಗಿಣಿಯೂ ಹಲವು ಹಂಚಿಕೆಗಳನ್ನು ಹುಡುಕಿ ಹೇಳುತ್ತಿದ್ದಳು. ಮಾಲದೇವನನ್ನೂ ಅವನ ಮಗನನ್ನೂ ಗಾಯಗೊಳಿಸದೆ ಉಪಾಯದಿಂದ ವಶಪಡಿಸಿಕೊಳ್ಳಬೇಕೆಂಬದೇ ಅವರಿಬ್ಬರ ನಿಶ್ಚಯವು. ಕಡೆಗೆ ಅವರು ಒಂದು ಮಾರ್ಗವನ್ನು ಗೊತ್ತು ಹಿಡಿದು ಅದರ ಸಿದ್ಧತೆಯನ್ನು ನಡೆಯಿಸಿದರು. ಕೂಡಲೇ ಹಮೀರಸಿಂಹನು ಕೇಳವಾಡದ ರಕ್ಷಣೆಗೆ ತಕ್ಕಷ್ಟು ಜನರನ್ನಿಟ್ಟು ಉಳಿದ ಎಲ್ಲ ದಂಡಿನೊಡನೆ ಚಿತ್ತೂರಿನ ಸಮೀಪದ ಒಂದು ಕೋಟೆಯಲ್ಲಿ ಇರಹತ್ತಿದನು. ಅಲ್ಲಿಂದ ಚಿತ್ತೂರು ಆರು ತಾಸಿನ ದಾರಿಯು ಮೇಲಿತ್ತು.

ವೈರಿಯು ದೊಡ್ಡ ಬಲದೊಡನೆ ಸಮೀಪದಲ್ಲಿಯೇ ಬಂದದ್ದನ್ನು ತಿಳಿದು ಮಾಲದೇವನು ಸ್ವಲ್ಪ ಬೆದರಿ ಜಾಗ್ರತೆಯಿಂದ ಇರಹತ್ತಿದನು. ಅವನ ದಂಡಿನಲ್ಲಿ ರಜಪೂತರೂ ಹೆಚ್ಚಾಗಿ ಪಠಾಣರೂ ಇದ್ದರು. ರಜಪೂತ ದಂಡಾಳುಗಳ ಮೇಲೆ ತನ್ನ ಮಗನಾದ **ರಣವೀರ**ನನ್ನೂ ಪಠಾಣರ ಸೈನ್ಯದ ಮೇಲೆ **ಅಮೀರಖಾನ**ನೆಂಬವನನ್ನೂ ನಿಯಮಿಸಿದ್ದನು.

ಒಂದು ದಿವಸ ಪ್ರಾತಃಕಾಲದಲ್ಲಿ ಮಾಲದೇವನು ಬಂದು ದಿವಾಣಖಾನೆಯಲ್ಲಿ ಕುಳಿತನು. ಆತನ ಮುಖದ ಮೇಲೆ ಚಿಂತೆಯ ಕಳೆಯು ಸುರಿಯುತ್ತಿತ್ತು. ಮಗಳ ಶೋಧಕ್ಕಾಗಿ ಬೇರೆ ಬೇರೆ ಕಡೆಗೆ ಹೋದವರೆಲ್ಲರೂ ಸಿಗಲಿಲ್ಲವೆಂತಲೇ ಹೇಳುತ್ತ ಬರಹತ್ತಿದ್ದರು. ಅದರಿಂದ ಆತನಿಗೆ ಅತಿಶಯ ದುಃಖವಾಗಿದ್ದರೂ ಅದನ್ನು ಹತ್ತಿಕ್ಕಿಕೊಂಡು ರಾಜಕಾರಣದ ಕೆಲಸವನ್ನು ಮಾಡುತ್ತಿದ್ದನು. ಇರಲಿ. ಅದೇ ಸಮಯದಲ್ಲಿ ಇಬ್ಬರು ಯೋಧರು ಬಂದು ಅವನಿಗೊಂದು ಪತ್ರವನ್ನು ಕೊಟ್ಟು ನಮಸ್ಕರಿಸಿದರು. ಮಾಲದೇವನು ಪತ್ರವನ್ನು ಬಿಚ್ಚಿದನು. ತನ್ನ ಮಗಳ ಸುಂದರವಾದ ಅಕ್ಷರಗಳು ಅವನಿಗೆ ಕಂಡವು. ಕೂಡಲೇ ಕುತೂಹಲದಿಂದ ಅದನ್ನು ಓದಿದನು. ಅದರಲ್ಲಿ ಬರೆದದ್ದೇನಂದರೆ—

**ಪ್ರಿಯ ತಂದೆಗಳ ಚರಣಸನ್ನಿಧಿಗೆ—**

“ **ತಾತಾ** ! ನಾನು ದುಷ್ಟರಿಂದ ಅಪಹೃತಳಾಗಿ ಇಂದಿಗೆ ಎರಡು ತಿಂಗಳಾಗುತ್ತ ಬಂತು. ಆದಾಗ್ಯೂ ನನ್ನ ಶೋಧವು ತಮಗಾಗಲಿಲ್ಲ. ನಾನು ನನ್ನ ವೃತ್ತಾಂತವನ್ನು ತಿಳಿಸಬೇಕೆಂದು ಎಷ್ಟು ಸಾಹಸಮಾಡಿದರೂ ಸಾಧಿಸಲಿಲ್ಲ; ಈಗ ಬಹಳ ಯುಕ್ತಿಯಿಂದ ಈ ಇಬ್ಬರನ್ನು ನನ್ನ ಕಡೆಗೆ ಮಾಡಿಕೊಂಡು ತಮ್ಮೆಡೆಗೆ ಕಳುಹಿದ್ದೇನೆ. ನಾನು ಈಗ ಭಿಲ್ಲರ ಸೆರೆಯಲ್ಲಿದ್ದೇನೆ. ಭಿಲ್ಲರು ನನ್ನನ್ನು ಪರಿಪರಿಯಿಂದ ಪೀಡಿಸುವರು. ಕಡೆಗೆ ನಾಳಿನ ರಾತ್ರಿ ನನ್ನ ಮೇಲೆ ಬಲಾತ್ಕಾರವನ್ನು ನಡಿಸಿ ನನ್ನ ವ್ರತಭಂಗವನ್ನು ಮಾಡುವರಂತೆ. ತಾತಾ! ತಮಗೆ ತಮ್ಮ ಕರುಳಿನ ಬಗ್ಗೆ ಅಂತಃಕರುಣ ಬಂದರೆ ಇಂದೇ ದಂಡೆತ್ತಿ ಬಂದು ನನ್ನ ಬಿಡುಗಡೆ ಮಾಡಬೇಕು. ಇಲ್ಲದಿದ್ದರೆ ನನ್ನ ಪ್ರಾಣವು ಉಳಿಯುಲಿಕ್ಕಿಲ್ಲ. ಇತಿ. ವಿ. ವಿ.

ದುಃಖಭೋಗಿನಿ, ‘ ಉರ್ಮಿಳಾ.’

ಮಾಲದೇವನು ಭಿಲ್ಲರ ಮೇಲೆ ಕರಕರನೆ ಹಲ್ಲು ತಿನ್ನುತ್ತ ಕೂಡಲೆ ರಣವೀರನನ್ನು ಕರೆಯಿಸಿ ಪತ್ರವನ್ನು ತೋರಿಸಿ—“ನಿನ್ನ ಎಲ್ಲ ದಂಡಿನೊಡನೆ ಒಮ್ಮಿಂದೊಮ್ಮೆ ಹೋಗಿ ನಿನ್ನ ತಂಗಿಯನ್ನು ಬಿಡಿಸಿಕೊಂಡು ಬಾ” ಎಂದು ಅಪ್ಪಣೆಮಾಡಿದನು. ಅಷ್ಟರಲ್ಲಿ ಪತ್ರ ತಂದ ಯೋಧರಲ್ಲಿ ಒಬ್ಬನು ನೆಲದ ಮೇಲೆ ಬಿದ್ದು ಉರುಳಾಡುತ್ತಿದ್ದನು. ಇನ್ನೊಬ್ಬನು ಅವನನ್ನು ಸಂತೈಸುತ್ತಿದ್ದನು. ಆಗ ಆತನು ಮಾಲದೇವನಿಗೆ—“ಒಡೆಯರೆ, ಬಹಳ ದೂರಿನಿಂದ ಒಂದೇ ಸವನೆ ಓಡಿಬಂದದ್ದರಿಂದ ನನ್ನ ಮಿತ್ರನಿಗೆ ಬಹಳ ಆಯಾಸವಾಗಿದೆ. ಹೊಟ್ಟೆಯಲ್ಲಿ ಉರಿಬಿಟ್ಟಿದೆಯಂತೆ, ಆದರಿಂದ ನಾವು ನಾಳಿನ ದಿವಸ ಇಲ್ಲಿಂದ ಹೊರಡುತ್ತೇವೆ” ಎನಲು ಮಾಲದೇವನು—“ನಿನ್ನ ಮಿತ್ರನ ಉಪಚಾರವನ್ನು ನಾವು ಮಾಡಿಸುತ್ತೇವೆ. ನೀನು ನಮ್ಮ ದಂಡಿನೊಡನೆ ಹೋಗಿ ಆ ಭಿಲ್ಲರಿರುವ ಸ್ಥಳವನ್ನು ತೋರಿಸು” ಎಂದನು. ಅದಕ್ಕೆ ಆತನು ಒಪ್ಪಿಕೊಂಡು ರಣವೀರನೊಡನೆ ಹೊರಟು ಹೋದನು. ಇತ್ತ ಆಯಾಸ ಹೊಂದಿದ ಯೋಧನ ಉಪಚಾರದ ವ್ಯವಸ್ಥೆಯಾಯಿತು. ಮಧ್ಯಾಹ್ನದ ಒಳಗಾಗಿ ರಣವೀರನು ತನ್ನ ದಂಡಿನೊಡನೆ ಹೊರಟು ಹೋದನು. ಚಿತ್ತೂರಲ್ಲಿ ಎಲ್ಲ ಪಠಾಣ ಸೈನಿಕರು ಮಾತ್ರ ಉಳಿದರು.

ಆ ದಿವಸ ಸಾಯಂಕಾಲದ ಮುಂದೆ ಕೋಟೆಯೊಳಗಿನ ಅಶ್ವಶಾಲೆ ಗಜಶಾಲೆಗಳ ಸೇವಕರು ತಮ್ಮ ಕೆಲಸ ತೀರಿಸಿಕೊಂಡು ಹರಟೆಗೊಚ್ಚುತ್ತ ಕುಳಿತಿದ್ದರು. ಅದೇ ನಸುಗತ್ತಲಾಗತೊಡಗಿತ್ತು. ಆಗ ಹರಕಮಾಸಿದ ಅರಿವೆಗಳನ್ನುಟ್ಟುಕೊಂಡ ಇಬ್ಬರು ಮೂಕ ಹಾಗು ಹುಚ್ಚಿಯರಾದ ಹೆಂಗಸರು ಹುಚ್ಚುಹುಚ್ಚು ಸನ್ನೆಗಳನ್ನು ಮಾಡುತ್ತ ಅಲ್ಲಿಗೆ ಬಂದರು. ಆ ಹರಟೆಯ ಗೆಳೆಯರಿಗೆ ಇವರೊಂದು ವಿನೋದದ ವಿಷಯವೇ ಆದರು. ಅವರೆಲ್ಲರು ಆ ಹುಚ್ಚಿಯರ ಸುತ್ತುಮುತ್ತು ನೆರೆದರು. ಅವರು ಸಾಕಷ್ಟು ಹರಟೆಗೊಚ್ಚಿದ ಬಳಿಕ ಒಬ್ಬೊಬ್ಬರೇ ಭೋಜನಕ್ಕಾಗಿ ನಡೆದರು. ಪಾಪ! ಆ ಹುಚ್ಚಿಯರ ಹೊಟ್ಟೆಯ ಬಗ್ಗೆ ಯಾರಿಗೆ ಅಂತಃಕರುಣ ಬರಬೇಕು!! ಅವರು ಅಲ್ಲಿಯೇ ಹುಲ್ಲು ಬಣವೆಗಳ ನಡುವಿನ ಸಂದಿಯಲ್ಲಿ ಮಲಗಿಕೊಂಡರು. ಮುಂದೆ ಅವರನ್ನು ಯಾರೂ ಕೆಣಕಲಿಲ್ಲ.

ಸುಮಾರು ಏಳೆಂಟು ತಾಸು ರಾತ್ರಿಯಾಗಿರಬಹುದು. ಚಿತ್ತೂರನ್ನು ಬೆಳಗುವಂಥ ಜ್ಯೋತಿಯೊಂದು ಆಕಾಶದಿಂದ ಬಿದ್ದಂತೆ ಚಿತ್ತೂರಿನ ತುಂಬೆಲ್ಲ ಒಮ್ಮಿಂದೊಮ್ಮೆ ಬೆಳಕು ಬಿತ್ತು. ನಕ್ಷತ್ರಪತನವಾಗುತ್ತಿರುವಂತೆ ಕಿಡಿಗಳು ಪಟ್ಟಣದ ತುಂಬೆಲ್ಲ ಹಾರಾಡಹತ್ತಿದವು. ಯಾಕೆ? ಕಾರಣವೇನು? ಓಹೊ! ಅತ್ತನೋಡಿರಿ! ಅಶ್ವಶಾಲೆಗಜಶಾಲೆಗಳ ಹತ್ತರಿರುವ ಹುಲ್ಲಿನ ಏಳೆಂಟು ದೊಡ್ಡ ದೊಡ್ಡ ಬಣಿವೆಗಳಿಗೆ ಬೆಂಕಿ ಹತ್ತಿ ಉರಿಯುತ್ತಿರುವವು. ಅಹಾ! ಎಂಥ ಅತ್ಯದ್ಭುತವಾದ ಉರಿಯದು! ಆಕಾಶವನ್ನೇ ಅಡರುತ್ತಿರುವದಲ್ಲ! ಚಿತ್ತೂರಿನ ಎಲ್ಲ ಜನರೂ ಎಚ್ಚತ್ತರು. ಪಟ್ಟಣದಲ್ಲಿ ಗೊಂದಲವೇ ಎದ್ದಿತು. ಸೈನಿಕರೂ ಬೇರೆ ಜನರೂ ಉರಿಯನ್ನು ಆರಿಸಲಿಕ್ಕೆ ಬಹಳ ಹೆಣಗಾಡಿದರು. ಬಹುತರ ಎಲ್ಲ ಜನರು ಆಲ್ಲಿಯೇ ನೆರೆದರು. ವಾಚಕರೇ, ಏನಾದರೂ ಉರಿಯು ಆರುವಂತೆ ತೋರುವದಿಲ್ಲ. ಆದರೂ ಆ ಜನರು ಇನ್ನೂ ಪ್ರಯತ್ನ ಮಾಡುವರು; ಮಾಡಲಿ! ನಾವು ಕೋಟೆಯ ದಕ್ಷಿಣ ಮಹಾದ್ವಾರದ ಕಡೆಗೆ ಸ್ವಲ್ಪ ಹೋಗೋಣ ಬನ್ನಿರಿ.

ಆ ಸಮಯದಲ್ಲಿ ಒಬ್ಬ ಯೋಧನು “ಅಯ್ಯೋ, ಅಯ್ಯೋ, ಘಾತವಾಯಿತು! ದುಷ್ಟರು! ದುಷ್ಟರು!!” ಎಂದು ಒದರುತ್ತ ದಕ್ಷಿಣ ಮಹಾದ್ವಾರದ ಕಡೆಗೆ ಓಡಿಬಂದನು. ದ್ವಾರದ ಪಹರೆಗಾರನು—“ಏನೋ ಮತ್ತೇನಾಯಿತು?” ಎಂದನು. ಕೂಡಲೇ ಬಂದವನು—“ನಾಯಿಕಸಾಹೇಬ! ಏನು ಹೇಳಲಿ! ಚಿತ್ತೂರಿನಲ್ಲಿ ಮೋಸಗಾರರೇ ಸೇರಿಕೊಂಡಂತಾಗಿದೆ. ಅತ್ತ ಹುಲ್ಲು ಬಣಿವೆಗಳಿಗೆ ಬೆಂಕಿಹತ್ತಿದೆ!! ಇತ್ತ ಅರಮನೆಯಲ್ಲಿ ಮಾಲದೇವರ ಕೊಲೆಯಾಗಿದೆ!! ನಾಯಿಕರೇ, ಖಾನಸಾಹೇಬರು (ಸೇನಾಪತಿ ಅಮಿರಖಾನರು) ಈಗಲೇ ಅರಮನೆಗೆ ಹೋಗುವರಂತೆ. ಅದಕ್ಕೆ ನಿಮ್ಮನ್ನು ಕರೆಯುತ್ತಾರೆ.” ಎಂದು ಗಾಬರಿಯಿಂದ ನುಡಿದನು. ಕೂಡಲೇ ಪಹರೆಗಾರನು—“ಹಾಗಾದರೆ ನೀನು ಇಲ್ಲಿಯೇ ನಿಲ್ಲು!!” ಎಂದು ಹೇಳಿ ಓಡಿಹೋದನು. ಓಡಿಬಂದ ಯೋಧನು ತನ್ನ ಮನದಲ್ಲಿಯೇ ನಕ್ಕು ಬಾಗಿಲಿಗೆ ಬಂದನು.

ಆ ಯೋಧನು ಅವಸರದಿಂದ ಕೋಟೆಯ ಬಾಗಿಲವನ್ನು ತೆರೆದನು. ಕೂಡಲೆ ಹೊರಗೆ ಸಜ್ಜಾಗಿ ನಿಂತ ಒಂದು ದೊಡ್ಡ ಸೈನ್ಯವು ಒಳಗೆ ಬಂದಿತು.

ಆ ಯೋಧನಾದರೂ ಅದೇ ಸೈನ್ಯದಲ್ಲಿಯೇ ಕೂಡಿ ಒಂದು ಕುದುರೆಯನ್ನೇರಿ ಎಲ್ಲ ಸೈನ್ಯವನ್ನು ಸಾಗಿಸಿಕೊಂಡು ಊರಿಯ ಕಡೆಗೆ ನಡೆದನು. ಊರಿಯನ್ನು ಆರಿಸುವದರಲ್ಲಿ ತೊಡಗಿದ ಪಠಾಣ ಸೈನಿಕರೂ ಸೇನಾಪತಿ ಅಮೀರಖಾನನೂ ವೈರಿಗಳನ್ನು ಕಂಡು ಬೆದರಿದರು. ಆದರೂ ಅವರು ನಿರುಪಾಯರಾಗಿ ಯುದ್ಧಕ್ಕೆ ನಿಂತರು. ಅದರಲ್ಲಿ ಎಷ್ಟೋ ಜನರ ಸಂಗಡ ಶಸ್ತ್ರಗಳೇ ಇದ್ದಿಲ್ಲ. ಹಮೀರಸಿಂಹನ ದಂಡಿನವರು ಮನಬಂದಂತೆ ಪಠಾಣರ ಶಿರಗಳನ್ನು ಕೊಯ್ದರು. ತಾಸರ್ಧತಾಸಿನೊಳಗೆ ಅಮೀರಖಾನನೂ ಉಳಿದ ಅವನ ಅಲ್ಪಸ್ವಲ್ಪ ದಂಡಿನವರೂ ಗತಿಗೆಟ್ಟು ಕೈಗೆ ಸಿಕ್ಕ ಕೋಟೆಯ ಬಾಗಿಲಗಳನ್ನು ತೆಗೆದು ಓಡಿಹೋದರು. ಬಳಿಕ ಹಮೀರಸಿಂಹನು ಸೈನ್ಯದೊಡನೆ ಅರಮನೆಯ ಕಡೆಗೆ ನಡೆದನು. ಅರಮನೆಯಲ್ಲಿ ಅವನನ್ನು ತಡೆಯುವವರೇ ಇದ್ದಿಲ್ಲ. ಮಾಲದೇವನಂತೂ ಅವರ ದೃಷ್ಟಿಗೆ ಬೀಳಲೇ ಇಲ್ಲ.

ಮಾಲದೇವನು ಪಟ್ಟಣದೊಳಗಿನ ಗೊಂದಲದಿಂದ ಎಚ್ಚತ್ತು ಬಣಿವೆಗಳಿಗೆ ಬೆಂಕಿಹತ್ತಿದ ಸುದ್ದಿಯನ್ನು ಕೇಳಿ ಗಾಬರಿಯಾದನು. ಪರಕ್ಷಣದಲ್ಲಿಯೇ ಹಮೀರಸಿಂಹನು ದೊಡ್ಡ ಸೈನ್ಯದೊಡನೆ ಬಂದು ತಮ್ಮ ಸೈನ್ಯವನ್ನು ಕಂಡಂತೆ ತುಂಡರಿಸಹತ್ತಿರುವನೆಂಬದನ್ನು ಕೇಳಿ ಹೌಹಾರಿ, ಕಂಗೆಟ್ಟು ಕುಟುಂಬವನ್ನೂ ಪರಿವಾರವನ್ನೂ ಕಟ್ಟಿಕೊಂಡು ಕೋಟೆಯ ಪೂರ್ವದ್ವಾರದಿಂದ ಪಾರಾಗಿ ಅಡವೀಬಿದ್ದು ಓಡಿಹೋದನು.

ರಾಣಾ ಹಮೀರಸಿಂಹನು ಅರಮನೆಯನ್ನು ವಶಮಾಡಿಕೊಂಡು ಅಲ್ಲಿ ಎಲ್ಲರೊಡನೆ ಇಳಿದುಕೊಂಡನು. ಬಳಿಕ ತನ್ನ ಜನರನ್ನು ಕಳಿಸಿ ಕೋಟೆಯಲ್ಲೆಲ್ಲ ಪಠಾಣರನ್ನು ಶೋಧಿಸಿ ಕೋಟೆಯ ಬಾಗಿಲಗಳನ್ನು ಭದ್ರವಾಗಿ ಹಾಕಿಸಿಬಿಟ್ಟನು. ರಾತ್ರಿಯಲ್ಲಿ ಅವಸರದಿಂದ ಹಾದೀ ನಡೆದು ಬಂದಿದ್ದರಾದ ಕಾರಣ ಸೈನಿಕರು ದಣಿದುದರಿಂದ ಅಲ್ಲಲ್ಲಿ ಮಲಗಿಕೊಂಡರು. ಹಮೀರಸಿಂಹನೂ ಅಜಿತಸಿಂಹನೂ ಸೇನಾಪತಿಯೂ ಮಾತಾಡುತ್ತ ಕುಳಿತಿದ್ದರು. ಅಷ್ಟರಲ್ಲಿ ಬೈರಾಗಿಣಿಯು ಅಲ್ಲಿಗೆ ಬಂದಳು. ಅವಳನ್ನು ನೋಡಿ ರಾಣಾನು ಮುಗುಳುನಗೆನಗುತ್ತ—“ಬೈರಾಗಿಣಿಯ ಕಾರ್ಯವು ಸಾಧಿಸಿತಲ್ಲ!” ಎನಲು ಅವಳು—“ತಮ್ಮ ಕೃಪೆಯಿದ್ದರೆ ಇನ್ನೂ ಬೇಕಾದಂಥವುಗಳನ್ನು ಸಾಧಿಸಬಹುದು” ಎಂದು ದರ್ಪದಿಂದ ನುಡಿದಳು. ರಾಣಾನು ಪ್ರೇಮ

ಪೂರ್ಣವಾದ ದೃಷ್ಟಿಯಿಂದಲೇ ಅವಳನ್ನು ಆದರಿಸಿದನು. ಬೈರಾಗಿಣಿಯೂ ಕುಳಿತುಕೊಂಡಳು.

ವಾಚಕ ಮಹನೀಯರೆ, ನೋಡಿದಿರಾ, ನಮ್ಮ ಉರ್ವಿಳಾ (ಬೈರಾಗಿಣಿ) ಹಮೀರಸಿಂಹರ ಚಾತುರ್ಯವನ್ನು!! ಹಮೀರಸಿಂಹನು ಈ ಮೊದಲು ಹೇಳಿದ ಪತ್ರವನ್ನು ಬೈರಾಗಿಣಿಯಿಂದ ಬರೆಯಿಸಿಕೊಂಡು ಇನ್ನೊಬ್ಬ ಸರದಾರನೊಡನೆ ವೇಷಾಂತರದಿಂದ ಬಂದು ಅದನ್ನು ಮಾಲದೇವನಿಗೆ ಮುಟ್ಟಿಸಿ ರಣವೀರನನ್ನು ಬೇರೆ ಕಡೆಗೆ ಕಳಹುವಂತೆ ಮಾಡಿದನು. ಚಿತ್ತೂರಿನೊಳಗಿನ ಸೈನ್ಯವನ್ನು ಕಡಿಮೆ ಮಾಡುವದೇ ಇದರ ಉದ್ದೇಶವಾಗಿತ್ತು. ಮುಂದೆ ಆಯಾಸದ ನೆವಮಾಡಿಕೊಂಡು ತಾನು ಚಿತ್ತೂರಲ್ಲಿಯೇ ಉಳಿದನು. ಇತ್ತ ಉರ್ವಿಳೆ (ಬೈರಾಗಿಣಿ)ಯು ತನ್ನ ದಾಸಿಸಹಿತ ಹುಚ್ಚಿಯರ ವೇಷವನ್ನು ಧರಿಸಿಬಂದು ಹುಲ್ಲಿನ ಬಣಿವೆಗಳ ಹತ್ತರ ಮಲಗಿಕೊಂಡು ನಡುರಾತ್ರಿಯಲ್ಲಿ ಆ ಬಣಿವೆಗಳಿಗೆ ಬೆಂಕೀ ಹಚ್ಚಿ ಮಾಯವಾದಳು. ಅದರಿಂದ ಗೊಂದಲವೆದ್ದ ಸಮಯದಲ್ಲಿಯೇ ಹಮೀರಸಿಂಹನು ಒದರುತ್ತ ಬಂದು ಪಹರೆಗಾರನನ್ನು ವಂಚಿಸಿ ಬೇರೆಕಡೆಗೆ ಕಳುಹಿ ದಕ್ಷಿಣದ ಮಹಾದ್ವಾರವನ್ನು ತೆರೆದನು. ಮೊದಲೇ ಗೊತ್ತಾದಂತೆ ಅಜಿತಸಿಂಹನೂ ಸೇನಾಪತಿಯೂ ಎಲ್ಲ ದಂಡಿನೊಡನೆ ಆ ರಾತ್ರಿಯಲ್ಲಿಯೇ ಬಂದು ಬಾಗಿಲ ಬಳಿಯಲ್ಲಿ ಸಿದ್ಧರಾಗಿ ನಿಂತಿದ್ದರು. ಅಹಹಾ! ಎಷ್ಟು ವ್ಯವಸ್ಥೆಯಿದು! ಏನು ಚತುರತನವಿದು! ಎಂಥ ಹಂಚಿಕೆಯಿದು!! ಇಂಥ ಕಾರ್ಯಕುಶಲರೂ ಯುದ್ಧಚತುರರೂ ಶೂರರೂ ಆದವರಿಗೆ ವಿಜಯಲಕ್ಷ್ಮಿಯು ಮಾಲೆಯನ್ನು ಹಾಕದೆ ಏನು ಮಾಡಿಯಾಳು!!!

## ೬. ಶತ್ರುನಾಶ.



ಚಿತ್ತೂರು ತಮ್ಮ ವಶದಲ್ಲಿ ಬಂದ ಎರಡು ಮೂರು ದಿವಸಗಳ ನಂತರ ಅಂದರೆ ಸೈನಿಕರು ಪೂರ್ಣವಿಶ್ರಾಂತಿಯನ್ನು ಪಡೆದ ಬಳಿಕ ರಾಣಾನು ಸೇನಾಪತಿ ವೀರಸಿಂಹನೊಡನೆ ಒಂದು ಸೈನ್ಯವನ್ನು ಕೊಟ್ಟು ರಣವೀರನ ಎದುರಿಗೆ ಕಳಿಸಿದನು. ಈ ಮೊದಲೇ ಹಮೀರ

ಸಿಂಹನ ವೇಷಧಾರೀ ಸರದಾರನು ರಣವೀರನನ್ನೂ ಅವನ ಸೈನ್ಯವನ್ನೂ ಅರವಲೀ ಬೆಟ್ಟದೊಳಗಿನ ಒಂದು ಗಹನಾರಣ್ಯದಲ್ಲಿ ಒಯ್ದು ಬಿಟ್ಟು, ತಾನು ಅವರ ಕಣ್ಣು ತಪ್ಪಿಸಿ ಬಂದು ಬಿಟ್ಟಿದ್ದನು. ರಣವೀರನು ಅರಣ್ಯದಲ್ಲೆಲ್ಲ ಅಲೆದಾಡಿ ತಂಗಿಯು ದೊರೆಯದ್ದರಿಂದ ನಿರುಪಾಯನಾಗಿ ಚಿತ್ತೂರಿನ ಕಡೆಗೆ ಹೊರಟಿದ್ದನು. ನಡುದಾರಿಯಲ್ಲಿಯೇ ವೀರಸಿಂಹನು ಅವನಿಗೆ ಎದುರಾದನು. ಅಲ್ಲಿ ಒಂದು ಸಣ್ಣ ಕಾಳಗವಾಗಿ ರಣವೀರನ ಸೈನ್ಯದೊಳಗಿನ ಬಹು ಜನರು ಮಡಿದರು. ಬಳಿಕ ಗತಿಗೆಟ್ಟ ರಣವೀರನು ಉಳಿದ ದಂಡಿನೊಡನೆ ಸಮರಭೂಮಿಯಿಂದ ಓಡಿಹೋದನು. ವೀರಸಿಂಹನು ಅವನನ್ನು ಬೆನ್ನಟ್ಟ ಮೇವಾಡದ ಗಡಿದಾಟಿಸಿ ತಿರುಗಿದನು. ಮತ್ತು ವಿಜಯೋತ್ಸವದೊಡನೆ ಚಿತ್ತೂರಿಗೆ ಬಂದು ರಾಣಾನಿಗೆ ಭೆಟ್ಟಿಯಾದನು.

ಸತ್ತುಕೆಟ್ಟು ರಣವೀರನು ಹಾಗೆಯೇ ದಿಲ್ಲಿಗೆ ಹೋದನು. ಅಷ್ಟರಲ್ಲಿ ಅವನ ತಂದೆಯಾದ ಮಾಲದೇವನೂ ತೊಳಲಿಬಳಲಿ ಅಡ್ಡಾಡಿ ದಿಲ್ಲಿಗೆ ಬಂದು ಸೇರಿದ್ದನು. ಆಗ ದಿಲ್ಲಿಯಲ್ಲಿ ಅಲ್ಲಾವುದ್ದೀನ ಖಿಲಜಿಯ ಮಗನಾದ **ಮುಬಾರಿಕಶಹ**ನು ಬಾದಶಹನಾಗಿದ್ದನು. ಮಾಲದೇವನೂ ರಣವೀರನೂ ಕೂಡಿ ಬಾದಶಹನಿಗೆ ಭೆಟ್ಟಿಯಾಗಿ ತಮ್ಮ ಹೀನಾವಸ್ಥೆಯನ್ನು ಹೇಳಿಕೊಂಡರು. ಅದನ್ನು ಕೇಳಿ ಬಾದಶಹನು ಅತ್ಯಂತ ಕೋಪಾವಿಷ್ಟನಾದನು. ಮತ್ತು ಒಂದು ದೊಡ್ಡ ಸೈನ್ಯವನ್ನು ಸಿದ್ಧಪಡಿಸಿಕೊಂಡು ಮಾಲದೇವ ರಣವೀರರೊಡನೆ ಸ್ವತಃ ಹೊರಟು ಚಿತ್ತೂರಿನ ಕಡೆಗೆ ನಡೆದನು. ಮಾಲದೇವನು, ಹಿಂದೊಮ್ಮೆ ತನ್ನ ಮಗಳು ತನಗೆ ರಾಣಾರ ವಂಶಜರಿಗೆ ಚಿತ್ತೂರನ್ನು ಒಪ್ಪಿಸುವದು ಬಳಿತೆಂದು ಬೋಧಿಸಿದ್ದನ್ನೂ ಈಗ ಅವಳು ಬರೆದ ಪತ್ರದಿಂದಲೇ ಇಷ್ಟೆಲ್ಲ ಅನರ್ಥವಾದದ್ದನ್ನೂ ನೆನಿಸಿ ಅವಳು ಹಮೀರನಲ್ಲಿಯೇ ಇರಬೇಕೆಂದು ನಿಶ್ಚಯಿಸಿದನು. ಇದರಿಂದ ಆತನು ಹಮೀರನನ್ನು ಹ್ಯಾಗಾದರೂ ನಾಶಮಾಡದೆ ಬಿಡಬಾರದೆಂದು ಗೊತ್ತು ಮಾಡಿದ್ದನು. ಇರಲಿ. ದಿಲ್ಲಿಯ ಬಾದಶಹನ ಸೈನ್ಯವು ಚಂಬಳಾ ನದಿಯವರೆಗೆ ಬಂದು ಅಲ್ಲಿ ಬೀಡು ಬಿಟ್ಟಿತು.

ಬಾದಶಹನು ತಮ್ಮ ಮೇಲೆ ದಂಡೆತ್ತಿ ಬರುವನೆಂಬದು ಹಮೀರಸಿಂಹನಿಗೆ ತಿಳಿದಕೂಡಲೆ ಆತನು ತಮ್ಮ ಎಲ್ಲ ಸೈನ್ಯವನ್ನೂ ಸಜ್ಜುಗೊಳಿಸಿದನು.

ಮೇವಾಡದ ಸುತ್ತಲಿನ ಸಣ್ಣ ಸಣ್ಣ ರಜಪೂತ ಅರಸರು ತಮ್ಮ ತಮ್ಮ ಸೈನ್ಯಗಳನ್ನು ಹಮೀರಸಿಂಹನ ಸಹಾಯಕ್ಕಾಗಿ ಕಳುಹಿಸಿಕೊಟ್ಟರು. ರಾಣಾನು ಒಟ್ಟು ಸೈನ್ಯದಲ್ಲಿ ಮೂರು ಭಾಗಗಳನ್ನು ಮಾಡಿದನು. ಮುಖ್ಯ ಭಾಗವನ್ನು ಸೇನಾಪತಿ ವೀರಸಿಂಹನ ಕೈಯಲ್ಲಿ ಕೊಟ್ಟನು. ಭಿಲ್ಲರ ಭಾಗದ ಮೇಲೆ ಭಿಲ್ಲಸರದಾರನಾದ ಭೂಜನನ್ನೂ ತಮ್ಮನಾದ ಅಜಿತಸಿಂಹನನ್ನೂ ನಿಯಮಿಸಿದನು. ಕಾದಿಟ್ಟ ಸೈನ್ಯವೆಂಬ ಭಾಗವನ್ನು ತನ್ನ ಕೈಯಲ್ಲಿಟ್ಟುಕೊಂಡನು. ಅಷ್ಟರಲ್ಲಿ ಬಾದಶಹನು ಚಂಬಳಾ ನದಿಯ ಆಚೆಯ ದಂಡೆಯ ಮೇಲೆ ಬೀಡು ಬಿಟ್ಟಿರುವನೆಂಬದನ್ನು ಕೇಳಿ, ಚಿತ್ತೂರಿನ ರಕ್ಷಣೆಗೆ ಒಬ್ಬ ರಜಪೂತ ಸರದಾರನನ್ನು ನಿಯಮಿಸಿ, ಸೇನಾಚಾಲಕರಿಗೆ ಅವರವರ ಕೆಲಸ ನಿಯಮಿಸಿಕೊಟ್ಟು ಎಲ್ಲ ಸೈನ್ಯದೊಡನೆ ಚಿತ್ತೂರಿನಿಂದ ಹೊರಟು ಒತ್ತರದಿಂದ ಪಯಣ ಮಾಡಿದನು. ಸೇನಾಪತಿ ವೀರಸಿಂಹನು ತನ್ನ ದಂಡಿನೊಡನೆ ಮುಂದೆ ಹೋಗಿ ನದಿಯನ್ನು ದಾಟಿದನು. ಅತ್ತ ಬಾದಶಹನ ದಂಡಿನವರೂ ಯುದ್ಧಕ್ಕೆ ಸಿದ್ಧರಾದರು. ನದಿಯ ಆಚೆಯ ಪ್ರದೇಶದಲ್ಲಿ ದೊಡ್ಡ ಕಾಳಗವು ನಡೆಯಿತು. ಒಂದು ಕಡೆಗೆ ಹೊಸಹುರುಪಿನಿಂದೊಡಗೂಡಿದ ರಜಪೂತರು; ಇನ್ನೊಂದು ಕಡೆಗೆ ಅಲ್ಲಾವುದ್ದೀನ ಮಲಿಕಕಾಫುರರ ಕೈಯಲ್ಲಿ ನುರಿತ ಪಠಾಣರು. ಒಂದೇ ಸವನೆ ಏಳೆಂಟು ತಾಸುಗಳ ವರೆಗೆ ಅತಿ ನಿಕರದ ಯುದ್ಧವೆಸಗಿದರೂ ಜಯಾಪಜಯಗಳು ಒಡೆದು ತೋರಲಿಲ್ಲ. ಉಭಯಬಲಗಳಲ್ಲಿಯೂ ಎಷ್ಟೋ ಜನರು ಮಡಿದರು. ಹೀಗಾಗಲು ವೀರಸಿಂಹನು ಕೆರಳಿದ ಸಿಂಹನಂತೆ ಗರ್ಜಿಸುತ್ತ ತನ್ನ ಸೈನ್ಯದ ಮುಂಭಾಗದಲ್ಲಿ ಬಂದು ಪಠಾಣರನ್ನು ತೆರಪಿಲ್ಲದೆ ಸಂಹರಿಸತೊಡಗಿದನು. ಆಗ ಅವನ ಸೈನಿಕರೂ ಜೀವದ ಹಂಗು ದೊರೆದು ಆವೇಶದಿಂದ ಕಾದಿದರು. ಆಗ ಮಾತ್ರ ಪಠಾಣರು ಹಿಂಜರಿದರು. ಅವರಲ್ಲಿ ಮರಣ ಸಂಖ್ಯೆಯು ಹೆಚ್ಚಾಯಿತು. ರಜಪೂತರ ಉತ್ಸಾಹವು ಬೆಳೆಯಿತು. ಅಷ್ಟರಲ್ಲಿಯೇ ಭೂಜನೂ ಅಜಿತಸಿಂಹನೂ ತಮ್ಮ ಭಿಲ್ಲ ಸೈನ್ಯದೊಡನೆ ಪಠಾಣರ ಹಿಂಭಾಗದ ಮೇಲೆ ಬಿದ್ದರು. ಆಗಂತೂ ಪಠಾಣರ ಹೌಹಾರಿ ಹೋಯಿತು. ಎರಡೂ ಕಡೆಯ ಹೊಡತದಲ್ಲಿ ಸಿಕ್ಕು ಪಠಾಣರಲ್ಲಿಯ ಮುಕ್ಕಾಲು ಪಾಲು ಜನರು ಸತ್ತರು. ಆಗ ಮುಬಾರಿಕಶಹನು ಗತಿಗಾಣದೆ ಉಳಿದವರೊಡನೆ ಬದಿಯಿಂದ ಜಾರಿ ಪಲಾಯನ ಮಾಡಿದನು.

ಬಾದಶಹನ ಛಾವಣಿಯು ರಜಪೂತರ ವಶವಾಯಿತು. ಭೋಜನೂ ಅಜಿತ ಸಿಂಹನೂ ವೈರಿಗಳಿಗೆ ತಿಳಿಯದಂತೆ ಮೇಲ್ಗಡೆಯಿಂದ ದೂರದಲ್ಲಿ ನದಿಯನ್ನು ದಾಟ ಬಂದು, ಪಠಾಣರ ಛಾವಣಿಯನ್ನೂ ಸಾಮಾನುಗಳನ್ನೂ ಅಪಹರಿಸಿ ಕೊಂಡೇ ಮೇಲೆ ಹೇಳಿದಂತೆ ಅವರ ಮೇಲೆ ಬಿದ್ದಿದ್ದರು. ಬಾದಶಹನಿಗೆ ಓಡಿಹೋಗುವದಾದರೂ ಸಾಧಿಸಿತೇ? ಇಲ್ಲ. ಅವನು ಉಳಿದ ಅಲ್ಪ ದಂಡಿ ನೊಡನೆ ದಿಲ್ಲಿಯ ಹಾದೀ ಹಿಡಿದು ಓಡುವಾಗ, ಅವರಿಗೆ ತಿಳಿಯದಂತೆ ಕೆಳ ಗಡೆಯಲ್ಲಿ ನದಿಯನ್ನು ದಾಟ ಬಂದು ತನ್ನ ಕೈಯೊಳಗಿನ ದಂಡಿನೊಡನೆ ದಿಲ್ಲಿಯ ದಾರಿಯಲ್ಲಿ ಕಾದಿದ್ದ ಹಮೀರಸಿಂಹನು ಅವರನ್ನು ಎದುರಿಸಿದನು. ಅಲ್ಲಿ ಉಂಟಾದ ಯುದ್ಧದಲ್ಲಿ ಮಾಲದೇವನೂ ಅವನ ಮಗ ರಣವೀರನೂ ರಾಣಾನಿಗೆ ಸೆರೆಸಿಕ್ಕರು. ಆಗಂತೂ ಕೈಕಾಲು ಕಳೆದುಕೊಂಡ ಬಾದಶಹನು ಒಡಂಬಡಿಕೆಯನ್ನು ಬೇಡಿಕೊಂಡನು. ಮತ್ತು ರಾಣಾನ ಹೇಳಿಕೆಯಂತೆ ತನ್ನ ಸೈನಿಕರ ಶಸ್ತ್ರಗಳನ್ನೆಲ್ಲ ಒಟ್ಟುಗೂಡಿಸಿ ಅವನಿಗೆ ಒಪ್ಪಿಸಿದನು. ಬಳಿಕ ರಾಣಾ ಹಮೀರಸಿಂಹನು ಬಾದಶಹನನ್ನು ಮರ್ಯಾದೆಯಿಂದ ಕರಕೊಂಡು ತನ್ನ ಎಲ್ಲ ಸೈನ್ಯದೊಡನೆ ವಿಜಯೋತ್ಸವದಿಂದ ಮೆರೆಯುತ್ತ ಚಿತ್ತೂರಿಗೆ ಬಂದನು.

ಬಾದಶಹನು ತನ್ನ ವಶದಲ್ಲಿ ಉಳಿದಿದ್ದ ಮೇವಾಡದ ಭಾಗವನ್ನೆಲ್ಲ ಬಿಟ್ಟುಕೊಟ್ಟದ್ದಲ್ಲದೆ ತನ್ನ ರಾಜ್ಯದೊಳಗಿನ ನಾಗೋರು, ಅಜಮೀರ, ರಣ ಥಂಬೂರ, ಇಸೋಪುರ ಎಂಬ ಪ್ರಾಂತಗಳನ್ನೂ ನೂರು ಆನೆಗಳನ್ನೂ ಕೊಟ್ಟು ಸ್ನೇಹದ ಒಡಂಬಡಿಕೆಯನ್ನು ಮಾಡಿಕೊಂಡು ರಾಣಾನಿಂದ ಮರ್ಯಾದೆ ಗೊಂಡು ದಿಲ್ಲಿಗೆ ಹೋದನು. ಇತ್ತ ಮಾಲದೇವನು ಪಶ್ಚಾತ್ತಾಪವನ್ನು ಪ್ರಕಟಿಸಿ ಕ್ಷಮೆಯನ್ನು ಬೇಡಲು ಹಮೀರಸಿಂಹನು ರಣವೀರನ ಸಹಿತ ಅವನನ್ನು ಬಿಡುಗಡೆ ಮಾಡಿ ಅವರಿಗೆ ಸ್ವಜನಾಭಿಮಾನ, ಸ್ವದೇಶಾಭಿಮಾನ, ಸ್ವಧರ್ಮಾಭಿಮಾನಗಳ ಬಗ್ಗೆ ಚನ್ನಾಗಿ ತಿಳಿಹೇಳಿದನು. ಮತ್ತು ಮೇವಾ ಡದ ರಾಜ್ಯದೊಳಗಿನ ನಿಮಚ, ಜೀರಣ, ರತನಪುರ ಎಂಬ ಮಹಾಲುಗಳನ್ನು ಮಾಲದೇವನಿಗೆ ಉಂಬಳಿಯಾಗಿ ಕೊಟ್ಟು ಅವನ ವಂಶಪರಂಪರೆಯಾಗಿ ನಡೆಯುವಂತೆ ವ್ಯವಸ್ಥೆ ಮಾಡಿದನು.

ಬಳಿಕ ಬೈರಾಗಿಣಿಯ ವೇಷವನ್ನು ಬಿಸುಟದ ಊರ್ಮಿಳೆಯು ತನ್ನ ತಂದೆಯ ಬಳಿಗೆ ಬಂದು—“ತಾತಾ, ನಾನು ತಮ್ಮ ಮನಸ್ಸಿನ ವಿರುದ್ಧ ನಡೆ

ದದ್ದರ ಬಗ್ಗೆ ನನ್ನನ್ನು ಕ್ಷಮಿಸಬೇಕು" ಎನ್ನುತ್ತ ಆತನ ಪಾದಗಳಿಗೆ ನಮಸ್ಕಾರ ಮಾಡಿದಳು. ಆಗ ಮಾಲದೇವನು ಅಶ್ರುಪೂರಿತನಾಗಿ ಪ್ರೀತಿಯಿಂದ—"ಮಗುವೇ, ನೀನು ಮಾಡಿದ್ದು ತಪ್ಪಲ್ಲ! ಯಥಾರ್ಥವೇ ಸರಿ. ನೀನು ಚಿಂತಿಸಬೇಡಮ್ಮ!" ಎನ್ನುತ್ತ ಅವಳನ್ನು ಹಿಡಿದೆತ್ತಿ ಮೈದಡವಿದನು. ಆ ಮೇಲೆ ಮಾಲದೇವನು—"ರಾಣಾ ಹಮ್ಮೀರಸಿಂಹ! ನನ್ನ ಉರ್ಮಿಳೆಯು ಈ ಮೊದಲೇ ನಿನ್ನಲ್ಲಿ ಅನುರಾಗಬದ್ಧಳಾಗಿದ್ದರೂ ನಾನೀಗ ಪ್ರೀತಿಪೂರ್ವಕವಾಗಿ ಇವಳನ್ನು ನಿನಗೆ ಅರ್ಪಿಸುತ್ತೇನೆ. ಸ್ವೀಕರಿಸಿ ನನ್ನ ಆಶೆಯನ್ನು ಕೈಗೂಡಿಸಬೇಕೆಂದು ಬೇಡಿಕೊಳ್ಳುತ್ತೇನೆ" ಎನ್ನುತ್ತ ಉರ್ಮಿಳೆಯ ಬಲಗೈಯನ್ನು ರಾಣಾನ ಎಡಗೈಯಲ್ಲಿಟ್ಟನು. ರಾಣಾನು ಪ್ರೀತಿಯಿಂದ ಅವಳ ಪಾಣಿಗ್ರಹಣವನ್ನು ಮಾಡಿದನು. ಮುಂದೆ ಉರ್ಮಿಳಾ ಹಮ್ಮೀರಸಿಂಹರ ವಿವಾಹವು ಚಿತ್ತೂರಲ್ಲಿ ಒಳ್ಳೇ ವೈಭವದಿಂದ ಜರುಗಿತು. ಮೇವಾಡದ ಪ್ರಜೆಗಳೆಲ್ಲರೂ ಅದನ್ನು ನೋಡಿ ಆನಂದಬಟ್ಟರು.

ಹಮ್ಮೀರಸಿಂಹನೊಡನೆ ಬಹಳ ದಿವಸಗಳಿಂದ ಹಗೆತನ ಹಿಡಿದ ಮಾಲದೇವನು ಇಂದು ಆತನ ಮಾವನಾದನು. ಮುಖ್ಯವೈರಿಯಾದ ಬಾದಶಹನಂತೂ ಹಣ್ಣುಹಣ್ಣಾಗಿ ಚಿತ್ತೂರಿನ ಹೆಸರನ್ನು ಸಹ ಎತ್ತದಂತಾಗಿ ಹೋದನು. ಸುತ್ತಲಿನ ಅರಸರು ತಮ್ಮಿಂದ ತಾವೇ ಸ್ನೇಹಿತರಾದರು. ಅಂತೂ ಮೇವಾಡಕ್ಕೆ ಅಹಿತ ಮಾಡುವವರು ಯಾರೂ ಉಳಿಯಲಿಲ್ಲ. ಒಮ್ಮೆ ಚಿತ್ತೂರಿನ ಶತ್ರುನಾಶವಾದಂತಾಯಿತು.

---

## ೭. ಮಹಾರಾಣಾ.

ಇಂದು ಚಿತ್ತೂರಿನಲ್ಲಿ ಎಲ್ಲಿ ನೋಡಿದರೂ ಆನಂದವೇ ಆನಂದವಾಗಿರುವದು. ಎಲ್ಲ ಕಡೆಯಲ್ಲಿಯೂ ಶುಭಲಕ್ಷಣವೇ ತೋರುತ್ತಿರುವದು. ಇಂದಿನ ಶುಭಮುಹೂರ್ತದಲ್ಲಿ ಹಮ್ಮೀರಸಿಂಹನ ಪಟ್ಟಾಭಿಷೇಕೋತ್ಸವವು ಜರುಗತಕ್ಕದ್ದಿರುವದು. ಸಭಾಲಯವನ್ನು ಬಗೆಬಗೆಯಿಂದ ಸಿಂಗರಿಸ ತೊಡಗಿದ್ದಾರೆ. ಜನರು ಅಲಂಕೃತರಾಗಿ ಆನಂದದಿಂದ ಓಡಾಡತೊಡಗಿದ್ದಾರೆ. ಆಮಂತ್ರಿತರಾದ ಮಾಂಡಲಿಕ

ರಾಜರು ಬಂದು ಉತ್ಸವದ ಕಾಲದ ಎದುರು ನೋಡುತ್ತಿರುವರು. ಈ ಸಮಯದಲ್ಲಿ ಉರ್ವಿಳೆಗಾದ ಆನಂದವನ್ನಂತೂ ಬಣ್ಣಿಸಲಳವಲ್ಲ!

ಉತ್ಸವದ ಕಾಲವು ಸಮೀಪಿಸಿತು. ಸಾಮಂತರೂ ಸರದಾರರೂ ಪ್ರಜೆಗಳೂ ಪರಿವಾರದವರೂ ಬಂದು ಸಭಾಲಯದಲ್ಲಿ ತಮತಮಗೆ ಯೋಗ್ಯವಾದ ಸ್ಥಳಗಳಲ್ಲಿ ಕುಳಿತರು. ಅತ್ತ ಅರಮನೆಯಲ್ಲಿ ಸುಮಂಗಲೆಯರು ಪಂಚಾಮೃತದಿಂದಲೂ ಔಷಧಿ ರಸಗಳಿಂದಲೂ ತೀರ್ಥಜಲಗಳಿಂದಲೂ ಕ್ರಮವಾಗಿ ಹಮೀರಸಿಂಹನಿಗೆ ಸ್ನಾನ ಮಾಡಿಸಿ ಸುಗಂಧದ್ರವ್ಯಗಳನ್ನು ಮೈಗೆ ತೊಡೆದರು. ಬಳಿಕ ಹಮೀರಸಿಂಹನು ದಿವ್ಯಾಂಬರಗಳನ್ನುಟ್ಟುಕೊಂಡು ಅಲಂಕಾರಗಳಿಂದ ಭೂಷಿತನಾಗಿ ಪಟ್ಟಕುದುರೆಯನ್ನೇರಿ ಸಭಾಲಯದ ಕಡೆಗೆ ಹೊರಟನು. ಆಗ ಭಟ್ಟಂಗಿಗಳು ಬಿರುದಾವಳಿಗಳನ್ನು ಹೊಗಳುತ್ತ ಮುಂದೆ ಮುಂದೆ ನಡೆದರು. ಅನೇಕ ವಾದ್ಯಗಳು ಭೋರ್ಗರೆಯಹತ್ತಿದವು. ಸೈನಿಕರೂ ನಾಗರಿಕರೂ ಸುತ್ತುಗಟ್ಟಿ ನಡೆದಿದ್ದರು. ಹಮೀರಸಿಂಹನು ಹೀಗೆ ಉತ್ಸವದೊಡನೆ ಬಂದು ಮಹಾದ್ವಾರದ ಬಳಿಯಲ್ಲಿ ಕುದುರೆಯನ್ನಿಳಿದು ಸಭೆಯನ್ನು ಪ್ರವೇಶಿಸಿದನು. ಕೂಡಲೆ ಎಲ್ಲರೂ ಎದ್ದು ನಿಂತು ಆತನನ್ನು ವಂದಿಸಿದರು. ಹಮೀರಸಿಂಹನು ರಾಣಾಲಕ್ಷ್ಮಣಸಿಂಹರ ಪೀಠದಲ್ಲಿ ಕುಳಿತುಕೊಂಡನು. ಬಳಿಕ ದಿವ್ಯಾಲಂಕಾರಗಳಿಂದ ಭೂಷಿತಳಾದ ಉರ್ವಿಳಾದೇವಿಯು ಪರಿಚಾರಿಕೆಯರೊಡನೆ ಮರ್ಯಾದೆಯಿಂದ ಬಂದು ಹಮೀರಸಿಂಹನ ಎಡಭಾಗವನ್ನು ಅಲಂಕರಿಸಿದಳು.

ಕೂಡಲೆ ಅಜಿತಸಿಂಹನು ಅವರ ಮೇಲೆ ಛತ್ರವನ್ನು ಹಿಡಿದನು. ಮಂತ್ರಿಸೇನಾಪತಿಯರು ಚವರಿಗಳನ್ನು ಬೀಸಿದರು. ಮಾಲದೇವನು ಸ್ವಹಸ್ತದಿಂದ ಲಕ್ಷ್ಮಣಸಿಂಹರ ಕಿರೀಟವನ್ನು ಹಮೀರಸಿಂಹನ ತಲೆಯಮೇಲಿಟ್ಟು ಖಡ್ಗವನ್ನು ಕೈಯಲ್ಲಿ ಕೊಟ್ಟನು. ಕೂಡಲೆ ಸಭೆಯಲ್ಲಿ ಉದ್ಭವಿಸಿದ “ಮಹಾರಾಣಾಕೀ ಜಯ” ಎಂಬ ಜಯಜಯಕಾರದ ಮಹಾಧ್ವನಿಯು ಸಭಾಲಯವನ್ನು ತುಂಬಿ ಹೊರಸೂಸಿ ಸೀಮಾಂತದ ವರೆಗೆ ಪಸರಿಸಿತು. ಬಳಿಕ ಸಾಮಂತರೂ ಸರದಾರರೂ ಪ್ರಜೆಗಳೂ ಕ್ರಮವಾಗಿ ತಮ್ಮ ತಮ್ಮ ಕಾಣಿಕೆಗಳನ್ನು ಅರ್ಪಿಸಿದರು.

ಹಮೀರಸಿಂಹನು ದಾನಾರ್ಹರಿಗೂ ಬಡವರಿಗೂ ವಿಪುಲಧನವನ್ನು ದಾನ ಮಾಡಿದನು. ಹಿಂದಿನ ಯುದ್ಧಗಳಲ್ಲಿ ಶೂರತನವನ್ನು ತೋರಿಸಿದ ಯೋಧರಿಗೆ ಅವರವರ ಯೋಗ್ಯತಾನುಸಾರವಾಗಿ ಉಡುಗರೆ ಅಲಂಕಾರ ಮೊದಲಾದ ಬಹುಮಾನಗಳನ್ನು ಕೊಟ್ಟನು. ಸಭೆಯೊಳಗಿನ ಜನರಿಗೆ ತಾಂಬೂಲವನ್ನೂ ಪರಿಮಳ ದ್ರವ್ಯಗಳನ್ನೂ ಕೊಟ್ಟ ಬಳಿಕ ಜಯಜಯಕಾರ ದೊಡನೆ ಸಭಾವಿಸರ್ಜನೆಯಾಯಿತು. ಆ ದಿವಸ ಮಹಾರಾಣಾನು ಬಂದ ವರಿಗೂ ನಾಗರಿಕರಿಗೂ ಮೃಷ್ಟಾನ್ನದ ಭೋಜನವನ್ನು ಮಾಡಿಸಿದನು. ಮರುದಿವಸ ಸಾಮಂತರು ಮೊದಲಾದ ಪರಸ್ಥಳದ ಜನರು ಮಹಾರಾಣಾನ ಅಪ್ಪಣೆಯನ್ನು ಪಡೆದು ಮರ್ಯಾದೆಗೊಂಡು ಹೋದರು.

ಮುಂದೆ ಮಹಾರಾಣಾ ಹಮೀರಸಿಂಹನು ಊರ್ಮಿಳಾ ರಾಣಿಯೊಡನೆ ಸುಖದಿಂದ ಕಾಲಕಳೆಯುತ್ತ ಶಾಂತತೆಯಿಂದಲೂ ನ್ಯಾಯದಿಂದಲೂ ಪ್ರಜಾಪಾಲನೆಯನ್ನು ಮಾಡಿದನು. ಮತ್ತು ಪ್ರತಿವರ್ಷ ಏಕಲಿಂಗಜಿಯ ಉತ್ಸವವನ್ನು ಒಳ್ಳೇ ವೈಭವದಿಂದ ಮಾಡ ತೊಡಗಿದನು. ಈತನ ಕಾಲ ದಲ್ಲಿ ಮೇವಾಡದ ರಾಜ್ಯವು ವಿಸ್ತಾರವಾದದ್ದಲ್ಲದೆ ಒಳ್ಳೇ ಘನತೆಯನ್ನು ಪಡೆಯಿತು. ಪ್ರಜೆಗಳು ಶಾಂತಿಸಂಪತ್ತುಗಳಿಂದೊಡಗೂಡಿ ಸುಖದಿಂದ ಕಾಲವನ್ನು ಕಳೆದರು.

ಚಿತ್ತೂರಿನ ಅರಮನೆಯು ಮತ್ತೆ ಮೆರೆಯತೊಡಗಿತು. ಕೆಡಹಲ್ಪಟ್ಟ ದೇವಾಲಯಗೋಪುರಗಳು ಮತ್ತೆ ಕಟ್ಟಲ್ಪಟ್ಟವು. ಹದಿನೈದು ವರ್ಷಗಳ ವರೆಗೆ ಗೂಬೆಗಳಿಗೆ ಆಶ್ರಯಸ್ಥಾನಗಳಾದ ದೇವಾಲಯಗಳು ಮತ್ತೆ ದೀಪೋತ್ಸವಗಳಿಂದಲೂ ಅರ್ಚಕರಿಂದಲೂ, ವಾದ್ಯಘೋಷಗಳಿಂದಲೂ ಮೆರೆಯ ತೊಡಗಿದವು. ಕೆಲವು ಕಾಲದ ವರೆಗೆ ಹಾಳು ಬಿದ್ದು ಇಕ್ಕಲ್ಪಟ್ಟ ಭವ್ಯವಾದ ಮನೆಗಳು ಮತ್ತೆ ಜನರಿಂದ ತುಂಬಿ ತುಳುಕಹತ್ತಿದವು. ಅಂಗಡಿಗಳು ಮುತ್ತುರತ್ನಾದಿಗಳಿಂದ ತುಂಬಿದವು. ಪಾಠಶಾಲೆಗಳು ಅಧ್ಯಾಪಕರಿಂದಲೂ ಅಧ್ಯಾಯಿಗಳಿಂದಲೂ ಶೋಭಿಸಹತ್ತಿದವು. ವಿಸ್ತಾರವಾದ ಚಿತ್ತೂರಿನ ಬೀದಿಗಳು ಬಗೆಬಗೆಯ ಜನರ ಒಡನಾಟದಿಂದ ಕಂಗೊಳಿಸಹತ್ತಿದವು. ರಾಜಾಂತಃಪುರವು ರಾಣಿಯರಿಂದಲೂ ದಾಸೀ ಜನಗಳಿಂದಲೂ ವೈಭವದಿಂದಲೂ ಪರಿಶೋಭಿಸಿತು. ಮಹಾರಾಣಾನಿಂದಲೂ, ಸಾಮಂತಮಂತ್ರಿ ಸೇನಾಪತಿ

ಗಳಿಂದಲೂ, ವಿದ್ವಾಂಸರಿಂದಲೂ ಸಭಾಲಯವು ಕಂಗೊಳಿಸಹತ್ತಿತು. ಅರಮನೆಯ ಮಹಾದ್ವಾರದ ಮೇಲೆ ಚಿತ್ತೂರಿನ ಮಹಾರಾಣಾರ ವಿಜಯ ಪತಾಕೆಯು ಮೆರೆಯತೊಡಗಿತು. ಈಗ ಹದಿನೈದುಹದಿನಾರು ವರ್ಷಗಳ ಹಿಂದೆ ಅಲ್ಲಾವುದ್ದೀನನಿಂದ ಸಮೂಲ ನಾಶಮಾಡಲ್ಪಟ್ಟ ಚಿತ್ತೂರಿನ ಎಲ್ಲ ವೈಭವಗಳೂ ತಿರುಗಿ ಪ್ರಾಪ್ತವಾದವು. ಸರಿ.

## ಮಹಾರಾಣಾ-ಹಮೀರಸಿಂಹ

ನಿಂದ

## ಚಿತ್ತೂರಿನ ಪುನರುದ್ಧಾರ

ವಾಯಿತು.



ಕಂದ ‖ ಅಳುವಂ ನಕ್ಕವ; ನಗುವಂ ।
ಅಳಲಿದವಂ; ಸೌಖ್ಯ-ದುಃಖ ಸ್ಥಿರವಾಗಿಹವೇ! ‖
ತಿಳಿಸದೆ ಮನುಜಗೆ ವಿಧಿ ನಿ- ।
ನ್ನಳವಂ, ತೊಳಲಿಸುವೆ, ನಿನ್ನಮಹಿಮೆಯದೆಂತೋ!! ‖



## ಕರ್ನಾಟಕ ವಾಙ್ಮಯೋತ್ತೇಜಕ ಗ್ರಂಥಮಾಲೆ.

ಕೆಲವು ಜನ ಮಹನೀಯರ ಆಶ್ರಯದಲ್ಲಿ ತೆಗೆಯಲ್ಪಟ್ಟ ಈ ಗ್ರಂಥಮಾಲೆಯ ಉದ್ದೇಶವು ಕರ್ನಾಟಕ ಭಾಷಾಮಾತೆಯ ಸೇವೆಮಾಡುವದೂ, ನಮ್ಮ ಪ್ರಾಚೀನರ ರಾಜ್ಯ ಪದ್ಧತಿ, ಧರ್ಮ, ಸ್ವಭಾವ, ಆಚಾರ ಮೊದಲಾದವುಗಳ ನಿಜಸ್ವರೂಪವನ್ನು ತಿಳಿಸುವ ಮನೋರಂಜಕವಾದ ಐತಿಹಾಸಿಕ ಗ್ರಂಥಗಳನ್ನು ಪ್ರಕಟಿಸುವದೂ, ಅವುಗಳ ಮುಖಾಂತರ ಜನರ ಮನಸ್ಸಿನಲ್ಲಿ ಸತ್ಪರಿಣಾಮಗಳನ್ನುಂಟುಮಾಡುವದೂ ಆಗಿರುತ್ತದೆ. ಕರ್ನಾಟಕದ ಇತಿಹಾಸಕ್ಕೆ ಸಂಬಂಧಿಸಿದ ಗ್ರಂಥಗಳೇ ಬಹುತರ ವಿಶೇಷವಾಗಿ ಹೊರಡುವವು. ಈ ಗ್ರಂಥಮಾಲೆಯ ಮೊದಲನೆಯ ಪುಸ್ತಕವು.

### ಕರ್ನಾಟಕ ಚಕ್ರವರ್ತಿ. ಚಾಲುಕ್ಯವಿಕ್ರಮ.

(ಇದು ಕ್ರೌನ್ ಸಾಯಿಜದ ಸುಮಾರು ೧೪೦ ಪುಟಗಳಷ್ಟು ಆಗಬಹುದು. ೯. ಮ ಈ ವರೆಗೂ ಪ್ರಕಟವಾಗದಿರುವ ಕಾರಣವನ್ನು ನಾನು ತಮ್ಮೆಲ್ಲರಿಗೆ ಅರುಹಿದ್ದೇನೆ.)

ಎರಡನೆಯ ಪುಸ್ತಕವು.

### ಮಹಾರಾಣಾ ಹಮೀರಸಿಂಹ

ಅಥವಾ

### ಚಿತ್ತೂರಿನ ಪುನರುದ್ಧಾರ

(ಇದು ಸದ್ಯಕ್ಕೆ ವಾಚಕ ಮಹನೀಯರ ಕೈಯಲ್ಲಿಯೇ ಇರುವದು.)

ಮುಂದಿನ ಗ್ರಂಥಗಳಾದರೂ ಬೇಗಬೇಗನೆ ಹೊರಡುವವು. ಇನ್ನೂ ಬಾಲ್ಯಾವಸ್ಥೆಯಲ್ಲಿರುವ ಈ ಗ್ರಂಥಮಾಲೆಯನ್ನು ಕನ್ನಡಿಗರೆಲ್ಲರು ಅದರ ತೊದಲ್ನುಡಿಗಳಿಂದಲೇ ಪ್ರೀತಿಯುಕ್ತರಾಗಿ ಎತ್ತಿ ಆದರಿಸಬೇಕೆಂದು (ಆಶ್ರಯ ಕೊಡಬೇಕೆಂದು) ಬೇಡಿಕೊಳ್ಳುತ್ತೇನೆ.

ತಾರೀಖು ೨೫—೧—೨೫,
ತೊರವಿ ತಾಲೂಕ ವಿಜಾಪುರ.

ತಮ್ಮೆಲ್ಲರ ಕೃಪಾಭಿಲಾಷಿ,
ಲ. ಅ. ಶಿರಹಟ್ಟಿ,
ವ್ಯವಸ್ಥಾಪಕ 'ಶ್ರೀ ಶಾರದಾ ವಿಲಾಸ ಮಂದಿರ.'